

ಎಳ್ಳುಕಾಳಿನಷ್ಟು ಬಕುತಿ ಎನ್ನೊಳಗಿಲ್ಲವಯ್ಯ
ಬೆಳ್ಳಕ್ಕಿಯಂತೆ ನಿನ್ನ ದ್ಯಾನವ ಮಾಡುವೆನಯ್ಯಾ ||ಪ||

ಗಂಡು ಮುಳುಗಪಕ್ಕಿಯಂತೆ ನೀರಕಂಡ ಕಡೆಗೆ ಮುಳುಗಿ
ಮಂಡೆ ಶೂಲೆಯಲ್ಲದೆ ಗತಿಯು ಇಲ್ಲ
ಮಂಡೆ ಮುಸುಕನಿಕ್ಕಿ ಮಂತ್ರ ಜಪಿಸುವೆನಯ್ಯ ||೧||

ಗಾಣದೆತ್ತಿನಂತೆ ಕಣ್ಣ ಪ್ರದಕ್ಷಿಣೆ ಮಾಡಿ
ಕಾಣದೆ ನಾ ತಿರುಗಿದೆ ಕಂಡುದಿಲ್ಲ
ಮಾಣಿಕ್ಯದ ರಾಶಿ ಅಡಿಗೆ ಕಂಗಳಯ್ಯನು ಪೋಗಿ
ಆಣಿಕಾರಿಕೆ ಮಾಡಿದಂದ ಈ ಕುಯುಕ್ತಿಯು ||೨||

ಇಕ್ಕಳವ ಕೈಯ ಪಿಡಿದುಕೊಂಡು ಕಾದ ಕಬ್ಬಿಣವಂತೆ
ಸುಕ್ಕಿಸಿಕೊಂಡಲ್ಲದೆ ಗತಿಯು ಇಲ್ಲ
ಪೊಕ್ಕಳುಪೂವಿನ ಶ್ರೀಪುರಂದರವಿಠಲನೆ
ಮಕ್ಕಳಾಟಿಕೆಯ ಬಿಡೊ ರಕ್ಷಿಸೊ ಎನ್ನೊಡೆಯ ||೩||

---ಶ್ರೀ ಪುರಂದರದಾಸರು

JAGADISH

ಸಂದರ್ಶಿಸಿ ಆನಂದಿಸಿ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ.



# ವಾರ್ಷಿಕ ಬ್ರಹ್ಮೋತ್ಸವಗಳು

27--9--92 ರಿಂದ 6--10--92

**ಕಾರ್ಯಕ್ರಮ ವಿವರ**

| ದಿನಾಂಕ | ವಾರ | ಹಗಲು | ಸಂಜೆ |
|---|---|---|---|
| 27--9--92 | ಭಾನುವಾರ | --- | ಅಂಕುರಾರ್ಪಣೆ |
| 28--9--92 | ಸೋಮವಾರ | ಧ್ವಜಾರೋಹಣ | ದೊಡ್ಡ ಶೇಷವಾಹನ |
| 29--9--92 | ಮಂಗಳವಾರ | ಚಿಕ್ಕ ಶೇಷವಾಹನ | ಹಂಸವಾಹನ |
| 30--9--92 | ಬುದವಾರ | ಸಿಂಹವಾಹನ | ಮುತ್ತಿನ ಚಪ್ಪರವಾಹನ |
| 1--10--92 | ಗುರುವಾರ | ಕಲ್ಪವೃಕ್ಷವಾಹನ | ಸರ್ವಬೂಪಾಲವಾಹನ |
| 2--10--92 | ಶುಕ್ರವಾರ | ಮೋಹಿನೀ ಅವತಾರ | ಗರುಡವಾಹನ |
| 3--10- 92 | ಶನಿವಾರ | ಹನುಮಂತ ವಾಹನ<br>ಸಂಜೆ — ವಸಂತೋತ್ಸವ | ಗಜವಾಹನ |
| 4--10--92 | ಬಾನುವಾರ | ಸೂರ್ಯಪ್ರಭವಾಹನ | ಚಂದ್ರಪ್ರಬವಾಹನ |
| 5- 10--92 | ಸೋಮವಾರ | ರದೋತ್ಸವ | ಅಶ್ವವಾಹನ |
| 6--10- 92 | ಮಂಗಳವಾರ | ಪಲ್ಲಕ್ಕಿ ಉತ್ಸವ, ಚಕ್ರಸ್ನಾನ | ಧ್ವಜಾವರೋಹಣ |

**ನೀವೂ ಬನ್ನಿ** **ತಿ ತಿ ದೇ** **ನಿಮ್ಮವರನ್ನೂ ಕರೆತನ್ನಿ**




ಸಂಪುಟ ೨೩] ಆಗಸ್ಟ್ ೧೯೯೨ [ಸಂಚಿಕೆ ೩


# ವಿಷಯಸೂಚಿ



ರಕ್ಷಾಪತ್ರ ಕೃಷ್ಣಾತೀರ

ಒಳಗಡೆ (1) ವಿನಾಯಕ -- ಚಿತ್ರ -- ಬಾಬುನಾಥ್--ಆರ್ ಬಿ
(2) ಶ್ರೀಕೃಷ್ಣ - ಚಿತ್ರ -- ಜಗದೀಶ್--ಕೆ


ಗೌರವ ಸಂಪಾದಕರು
ಶ್ರೀ ಎಂ ವಿ ಎಸ್ ಪ್ರಸಾದ್, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ
ತಿ ತಿ.ದೇ., ತಿರುಪತಿ.

ಸಂಪಾದಕ
ಕೆ ಸುಬ್ಬಾರಾವು ಎಂ.ಎ

ಉಪಸಂಪಾದಕ
ಬಿ ಎನ್ ಶ್ರೀನಿವಾಸನ್ ಎಂ ಎ.,

ಮುದ್ರಣ
ಎಂ ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ ತಿ ದೇ ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ ೧--೦೦**
**ವಾರ್ಷಿಕ ಚಂದಾ ೧೨--೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ ---ಸಂ||




ಮನುಷ್ಯ ನಿರ್ವಾತದಲ್ಲಿ ಬದುಕಲಾರ -- ತನಗೆ ಎಷ್ಟೇ ಬುದ್ಧಿ ಇದ್ದರೂ ಅವನಿಗೆ ಪ್ರಕೃತಿಶಕ್ತಿಗಳ, ಪಂಚ ಭೂತಗಳ ನೆರವು ಬೇಕೇ ಬೇಕು ಇಂತಲ್ಲಿ ನೀರು - ಎರಡು ಅನಿಲಗಳ ಒದು ಸಂಯುಕ್ತ -- ಎಷ್ಟು ಉಪಕಾರಿ ಎನ್ನುವುದು ನಮ್ಮ ಸೌರವ್ಯೂಹದಲ್ಲಿಯೇ ಇರುವ -- ಭೂಮಿಯ ವಾತಾವರಣಕ್ಕೆ ಹತ್ತಿರವಾದ ವಾತಾವರಣವೇ ಇದ್ದರೂ ನೀರು ಇಲ್ಲದ -- ನೀರು ಉಂಟಾಗದ ಪರಿಸ್ಥಿತಿಯ -- ಇತರ ಗ್ರಹಗಳಲ್ಲಿ ಜೀವರಾಶಿಯಿಲ್ಲವೆನ್ನುವ ಅಂಶವನ್ನು ನೆನೆದರೆ ಮನದಟ್ಟಾಗುವ ಅಂಶ

ಈ ಒಂದು ನಿತ್ಯ ಸತ್ಯವನ್ನು ತಿಳಿದೇ ಪ್ರಾಚೀನ ಬುದ್ಧಿ ಜೀವಿಗಳು ಪ್ರಕೃತಿಯ ಶಕ್ತಿಗಳಿಗೆ ಅವುಗಳ ಕೊಡುಗೆಗಾಗಿ ಕೃತಜ್ಞತೆಗಳನ್ನು ಅರ್ಪಿಸಿ ಆರಾಧಿಸಿದರು ಮೊದಮೊದಲಿಗೆ ಭಯ, ಆಶ್ಚರ್ಯಗಳೇ ಆರಾಧನೆಗೆ ಕಾರಣವೆಂದು ಇಂದು ಹೇಳುತ್ತಿದ್ದರೂ ಕ್ರಮೇಣ ಭಯವನ್ನು ಕುತೂಹಲವೂ, ಆಶ್ಚರ್ಯವನ್ನು ಜಿಜ್ಞಾಸೆಯೂ, ಹಿಂದಿಕ್ಕಿ ಕಾರ್ಯಕಾರಣಚಿಂತನ ಆರಂಭವಾಗಿ ಸತ್ಯದರ್ಶನದ ಉತ್ಸಾಹ, ಆಸಕ್ತಿಗಳು ಮುಂದುವರೆದು ಸಕಾರಣವಾಗಿಯೇ ಕೃತಜ್ಞತೆ ಆರಾಧನೆಗಳು ಹೊರಹೊಮ್ಮಿರಬೇಕು ಸತ್ಯದರ್ಶನಕ್ಕೆ ಅನುಕೂಲವಾಗುವಂತೆ ತೆರೆಯನ್ನು ಸರಿಸು ಎಂದು ಸೂರ್ಯನನ್ನು ಪ್ರಾರ್ಥಿಸುವ ಉಕ್ತಿಯಲ್ಲಿ ಈ ಅಂಶ ಖಚಿತವಾಗುತ್ತದೆ

ಸೆಪ್ಟಂಬರ್ ತಿಂಗಳಿನಲ್ಲಿ ಕೃಷ್ಣಾನದೀ ಪುಷ್ಕರ ಕಾಲ ಆರಂಭ ಗುರುವು ಮೇಷಾದಿ ಹನ್ನೆರಡು ರಾಶಿಗಳಲ್ಲಿ ಸಂಚರಿಸುತ್ತ -- ವರ್ಷಕ್ಕೆ ಒಂದು ರಾಶಿಯಂತೆ ಮುಂದುವರೆಯುವಾಗ ಯಾವ ರಾಶಿಯಲ್ಲಿ ಪ್ರವೇಶಿಸುವನೊ ಆ ರಾಶಿಗೆ ಸಂಬಂಧಿಸಿದ ನದಿಗೆ ಆ ಪ್ರವೇಶಕಾಲದ ಹನ್ನೆರಡುದಿನ ಪುಷ್ಕರಕಾಲವೆನ್ನಬಹುದು ಈಗ ಗುರು ಕನ್ಯಾರಾಶಿಯನ್ನು ಪ್ರವೇಶಿಸರಿದ್ದಾನೆ ಇಲ್ಲಿ ಕೃಷ್ಣಾನದೀ ಪುಷ್ಕರ ಆರಂಭವಾಗಬೇಕು

ಪುಷ್ಕರ ಕಾಲವೆಂದರೆ ನದೀ ಸ್ನಾನ, ನದೀ ಉಪಾಸನೆ, ಶ್ರಾದ್ಧ ತರ್ಪಣ ಪ್ರದಾನಗಳಿಗೆ ಸಕಾಲ ತಾವು ಸ್ನಾನ ಮಾಡಿ ಪುನೀತರಾಗುವುದಲ್ಲದೆ, ತಮ್ಮ ಹಿರಿಯರಿಗೂ ಈ ಪಾವಿತ್ರ್ಯ ಪುಣ್ಯ ತಲುಪಲಿ ಎಂದು ಆಶಿಸಿ ಶ್ರಾದ್ಧ ತರ್ಪಣ ನೀಡುವುದು ಇಲ್ಲಿ ಇನ್ನೂ ಒಂದು ಅಂಶ ಪ್ರಮುಖ -- ದೂರ ದೂರದಿಂದ ನದೀ ದಡವನ್ನು ಸೇರಿ ಸಾಮೂಹಿಕವಾಗಿ ಸಾಂಘಿಕವಾಗಿ ನೆರೆದು ಸಹಜೀವನವನ್ನು ಪ್ರೋತ್ಸಾಹಿಸುವಿಕೆ ಭೂಗೋಳವನ್ನೇ ಕಾಲುಷ್ಯದಿಂದ ಕಾಪಾಡಬೇಕೆಂಬ ಜಗತ್ಪ್ರಮುಖರ ಸಮ್ಮೇಳನಗಳ ಈ ಹೊತ್ತಿನಲ್ಲಿ ಕಾಲುಷ್ಯ ವಿರೋಧದ -- ನಿರೋಧದ ಬಗ್ಗೆ ತಮ್ಮದೇ ಆದ ರೀತಿಯಲ್ಲಿ ಶಿಕ್ಷಣ ನೀಡುವ ಮಹತ್ವಪಡೆದ ಜನ ಸಾಂದ್ರತೆಯ ಸಂದರ್ಭ

ಇಂತಲ್ಲಿ ಜನ ನೆರೆಯುವ ಅವಕಾಶ ಒಂದೊದಗಿದೆ ಇದನ್ನು ಆರ್ಥಿಕ ಸಾಮಾಜಿಕ ಶೈಕ್ಷಣಿಕ ಅಭಿವೃದ್ಧಿಗೆ, ಕಾಲುಷ್ಯನಿವಾರಣೆಯ ಶಿಕ್ಷಣಕ್ಕೆ ಬಳಸಬೇಕಾದ್ದು ಇಲ್ಲಿನ ಸಧ್ಯದ ಅಗತ್ಯಕರ್ತವ್ಯ ಅದಕ್ಕಾಗಿ ಸಂಘ, ಸಂಸ್ಥೆಗಳು, ಸರಕಾರ, ಸ್ವಯಂಸೇವಕರು ಮುಂದಾಗಬೇಕು

ವೈಯಕ್ತಿಕ ಹಂತದಲ್ಲಿ ಇದೊಂದು ಇಹಪರ ಸಾದನೆಗೆ ದೊರೆತಿರುವ ಅವಕಾಶ ಪ್ರಕೃತಿಗೆ -- ಪ್ರಮುಖವಾಗಿ ಜೀವನ ಮೂಲದ್ರವ್ಯವಾದ ಜಲಶಕ್ತಿಗೆ ನಮ್ಮ ಕೃತಜ್ಞತೆ ನಮನಗಳನ್ನು ಅರ್ಪಿಸುವಲ್ಲಿ -- ಸ್ನಾನ, ಜಪ, ತಪ, ತರ್ಪಣಾದಿಗಳ ಅನುಷ್ಠಾನದ ಮೂಲಕ ಉದ್ಧಾರದ ಮಾರ್ಗವನ್ನು ಕ್ರಮಿಸಲು -- ಹಿರಿಯರು ಹಾಕಿ ಕೊಟ್ಟಿರುವ ರಾಜಮಾರ್ಗ ಇದರಲ್ಲಿ ಮುಂದವರೆಯುವ ಮನ ಬೇಕಷ್ಟೆ.

ಗಂಗೇ ಚ ಯಮುನೇ, ಕೃಷ್ಣೇ, ಗೋದಾವರೀ ಸರಸ್ವತೀ |
ನರ್ಮದೇ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂ ಕುರು ||



# ಪ್ರಾರ್ಥನೆ

---ಎಚ್ ವಿ ನರಸಿಂಹಮೂರ್ತಿ

ಸರ್ವಶಕ್ತನಾದ ಭಗವಂತನಲ್ಲಿ ಅಚಲ ನಂಬಿಕೆಯನ್ನಿಟ್ಟು, ನಮ್ಮ ಅಂತರಾಳವನ್ನು ಬಯಲುಮಾಡುವ ಮಾದ್ಯಮವೇ ಪ್ರಾರ್ದನೆ ಅದು ದೇವರೊಡನೆ ನಡೆಸುವ ಪವಿತ್ರಸಂಬಾಷಣೆ ಬಗವಂತನ ಮಂಗಳದಾಮ ತಲುಪುವ ನೇರದಾರಿ ಬಾಳಿನ ಸುಖ--ದು ಖಗಳನ್ನು ಎದುರಿಸುವ ರಕ್ಷಾಕವಚ ದುರ್ಬಲರ ಬಲ, ನಿರ್ಗತಿಕರ ಗತಿ, ಈ ಪ್ರಾರ್ದನೆ

ಮಾನವ ತನ್ನ ಸುದೀರ್ಘ ಜೀವನಯಾತ್ರೆಯಲ್ಲಿ ದೈಹಿಕ, ಮಾನಸಿಕ ಹಾಗೂ ಆದ್ಯಾತ್ಮಿಕವಾಗಿ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ, ಬಗೆ -- ಬಗೆಯ ಸುಖ--ದು ಖಗಳನ್ನು ಅನುಬವಿಸಬೇಕಾಗುತ್ತದೆ ಕಷ್ಟ -- ಸುಖಗಳಿಂದ ದೊರಕುವ ಮಿಶ್ರ ಫಲಗಳ ವೈವಿದ್ಯಮಯವಾದ ಅನುಬವಕ್ಕೆ ತುತ್ತಾದಂತೆ, ಮನುಷ್ಯ ತನ್ನ ಶಕ್ತಿ--ಯುಕ್ತಿಗಳ ಮಿತಿಯನ್ನು ಕಾಣುತ್ತಾನೆ ಬದುಕಿನಲ್ಲಿ ತನ್ನನ್ನು ಕಾಡುವ ಪ್ರಬಲಸಮಸ್ಯೆಗಳನ್ನು ಎದುರಿಸಿ ಪರಿಹಾರ ಕಂಡುಕೊಳ್ಳಲು ತನ್ನ ಬಾಳಿಗೆ ವಿಶೇಷವಾಗಿ ಚೇತನ ಹಾಗೂ ಬೆಳಕನ್ನು ಬಯಸುತ್ತಾನೆ ಆಗ ತನ್ನ ಸಹಾಯಕ್ಕೆ, ಸಂತೃಪ್ತಿಗೆ ಸರ್ವೇಶ್ವರನಾದ ಬಗವಂತನನ್ನು ಮೊರೆ ಹೋಗುತ್ತಾನೆ ತನ್ನಹೃದಯದ ಬಾಪೆಯಿಂದ ಅವನಲ್ಲಿ ತನ್ನ ಅಳಲನ್ನು ತೋಡಿಕೊಳ್ಳುತ್ತಾನೆ ದಿನ ದಿನವೂ ತನ್ನ ಬಾಳು ಬಗವಂತನ ರಕ್ಷನೆಗೆ ಒಳಗಾಗಲಿ -- ಎಂದು ಹೃದಯಾಂತರಾಳದಿಂದ ಬೇಡುತ್ತಾನೆ ತನ್ನ ಬದುಕು ಅರ್ದಪೂರ್ಣವಾಗಿ ಪರಿವರ್ತನೆಗೊಳ್ಳಲಿ, ಹೊಸ--ಹೊಸ ಆಯಾಮಗಳನ್ನು ಹೊಂದಲಿ -- ಎಂದು ಕೋರುತ್ತಾನೆ ಇಂತಹ ಮೊರೆ, ಕೋರಿಕೆ, ಬೇಡಿಕೆಗಳೆಲ್ಲ ಪ್ರಾರ್ದನೆಯ ವಿಶಾಲಪರಿದಿಗೆ ಸೇರುತ್ತವೆ

ಅತಿಬೌತಿಕತೆಯ ಯಾಂತ್ರಿಕ ಜೀವನಕ್ಕೆ ಸಿಲುಕಿ, ಬೌದ್ದಿಕವಿಕಾಸ -- ಆದ್ಯಾತ್ಮಿಕ ಪ್ರಗತಿಗಳೆಲ್ಲ ಕುಬ್ಜವಾಗಿ, ಮನಸ್ಸಿನ ಶಾಂತಿ ಪೂರ್ತಿಯಾಗಿ ಕದಡಿಹೋಗಿ, ದಾರಿ -- ದಿಕ್ಕುಗಳೊಂದೂ ಕಾಣದೆ ಪರಿತಪಿಸುವ ಇಂದಿನ ಮಾನವನಿಗೆ ಒಂದು ಆಶ್ರಯದಾಮ, ಪ್ರಾರ್ದನೆ ನಮ್ಮಜೀವನದ ಸದುದ್ದೇಶ್ಯಗಳ ಸಾಧನೆಗೆ, ದರ್ಮ ಸಮ್ಮತವಾದ ರೀತಿಯಲ್ಲಿ ಬದುಕಿನ ನಿರ್ವಹಣೆಗೆ ನಮಗೆ ದಿನ --ದಿನವೂ ಬೇಕಾದ ಜೀವನ ಶಕ್ತಿಯನ್ನೂ, ವಿಶೇಷಬೆಳಕನ್ನೂ ಪ್ರಾರ್ಥನೆಯು ನಮಗೆ ಒದಗಿಸಿಕೊಡುತ್ತದೆ ಭಗವಂತನ ಕೃಪೆ ಪಡೆಯಲು ನಮಗೆ ಅನುಕೂಲ ಒದಗಿಸಿಕೊಡುವ ಪವಿತ್ರಕ್ರಿಯೆ, ಈ ಪ್ರಾರ್ದನೆ

'ಪ್ರಾರ್ದನೆಯು ನನ್ನ ಬದುಕಿನ ಉಳಿವಿನ ಶಕ್ತಿ, ಅದಿಲ್ಲದಿದ್ದರೆ ನಾನು ಎಂದೋ ಹುಚ್ಚನಾಗಿ ಬಿಡುತ್ತಿದ್ದೆ ಪ್ರಾರ್ದನೆಯು ದಿವಸದ ಕೀಲಿಗೈ, ರಾತ್ರಿಯ ಬೀಗ' ಎಂದು ಗಾಂದೀಜೀಯವರು ಪ್ರಾರ್ದನೆಯ ಮಹತ್ವ ತಿಳಿಸಿದ್ದಾರೆ ಸ್ವಾಮಿ ವಿವೇಕಾನಂದರು 'ಪ್ರಾರ್ದನೆಯಿಂದ ಸೂಕ್ಷ್ಮವಾದ ಶಕ್ತಿಗಳು ಬಹಳ ಸುಲಬವಾಗಿ ಜಾಗೃತಗೊಳಿಸಲ್ಪಡುತ್ತವೆ ಪ್ರಾರ್ದನೆಯನ್ನು ಅಂತ ಕರಣಪೂರ್ವಕವಾಗಿ ಮಾಡಿದರೆ ಎಲ್ಲ ಬಯಕೆಗಳೂ ಈಡೇರುತ್ತವೆ - ಅನ್ನುತ್ತಾರೆ 'Prayer moves the hand that moves the universe' ಎಂಬ ವರ್ಡ್ಸ್‌ವರ್ತ್ ಕವಿಯ ಮಾತು, 'More things are wrought by prayer than this world dreams of' -- ಎಂಬ ಟೆನಿಸನ್ನನ ಅನಿಸಿಕೆ ಪ್ರಾರ್ದನೆಯ ಮಹತ್ವವನ್ನು ಪ್ರತಿಬಿಂಬಿಸುತ್ತವೆ

ಪ್ರಾರ್ದನೆ ಮಾಡುವಾಗ ನಮ್ಮಲ್ಲಿ ದೈಹಿಕ -- ಮಾನಸಿಕ ಹಾಗೂ ಆದ್ಯಾತ್ಮಿಕವಾಗಿ ವಿಶೇಷಶಕ್ತಿ ಉತ್ಪನ್ನವಾಗುತ್ತದೆ ನಮ್ಮ ಅಹಂಕಾರಕ್ಕೆ ಸಂಬಂದಿಸಿದ ಬಾವನೆಗಳು ತೀರಾಕ್ಷೀಣವಾಗುತ್ತದೆ ಪ್ರಾರ್ದನೆಯ ಸಾದನೆಯನ್ನು ಮುಂದುವರಿಸಿದಂತೆ 'ನಾನು' -- 'ನನ್ನಯ' ಎಂಬ ಸ್ವಾರ್ದ, ಅಹಂಕಾರದ ಬಾವನೆಯ ಬದಲು 'ನೀನು--ನಿನ್ನನು' ಎಂಬ ಶರಣಾಗತಿಯ ಭಾವನೆ ಮೂಡಿಬರುತ್ತದೆ 'ಮತ್ತಃಪಾತಕಿ ನಾಸ್ತಿ ಪಾಪಘ್ನೀ ತ್ವತ್ಸಮಾ ನಹಿ' ಅದವಾ 'ದಾಸೋ ಽಹಂ ಮಿತ ಮಾಂ ಬುದ್ದ್ವಾ ಕ್ಷಮಸ್ವ ಪರಮೇಶ್ವರ' ಮೊದಲಾದ ಪ್ರಾರ್ದನೆಯ ತುಣುಕುಗಳಲ್ಲಿ ಕಾಣುವಂತ ಅಹಂಕಾರ - ಮಮಕಾರಗಳು ಕರಗಿ, ಈ ವಿಶಾಲವಿಶ್ವವೆಂಬ ಸಿಂದುವಿನಲ್ಲಿ ನಾನೊಂದು ಬಿಂದು ಮಾತ್ರ -- ಎಂಬ ವಿನಯದ ಮನೋಭಾವ ಜಾಗೃತಗೊಳ್ಳುತ್ತದೆ ಮಾನಸಿಕ ಒತ್ತಡಗಳು ನಿಯಂತ್ರಣಕ್ಕೆ ಬಂದು, ದೈಹಿಕ ಮತ್ತು ಮಾನಸಿಕ ಆಯಾಸಗಳು ಕಡಿಮೆಯಾಗುತ್ತವೆ, ಬದುಕು ಉಲ್ಲಾಸಮಯವಾಗುತ್ತದೆ ಹಿಂದೆ ಆದ್ಯಾತ್ಮಿಕ ಪ್ರಯೋಗಗಳನ್ನು ನಡೆಸಿ, ಅನುಭವ ಪಡೆದ ಸಾದು--ಸಂತರು, ಪುಣ್ಯಪುರುಷರು ಪ್ರಾರ್ದನೆಯ ಮಹಿಮೆ ಕೊಂಡಾಡಿದರೆ, ಇಂದು ಭೌತಶಾಸ್ತ್ರಜ್ಞರು, ಮಾನಸಿಕತಜ್ಞರು, ದೇಹವಿಜ್ಞಾನಿಗಳೂ ಸಹ ಪ್ರಾರ್ದನೆಯ ಮಹತ್ವವನ್ನು ಕೊಂಡಾಡುತ್ತಿದ್ದಾರೆ ಗುಂಡಿ ಒತ್ತಿದೊಡನೆ ಚಿಮ್ಮುವ ಚಿಲುಮೆಯಂತೆ, ಪ್ರಾರ್ದನೆಯ ಪರಿಪಾಠದಿಂದ ಪರಿವರ್ತನೆಗೆ ಪ್ರವರ್ತಕವಾಗಬಲ್ಲ ಅಂತ ಶಕ್ತಿಯ ಮೂಲ ಕರಗತ ವಾಗುತ್ತದೆಂಬುದನ್ನು ತಿಳಿದು ಬಿತ್ತರಿಸಿದ ನೋಬೆಲ್ ಪ್ರಶಸ್ತಿ ಪುರಸ್ಕೃತ ವಿಜ್ಞಾನಿ, ವೈದ್ಯ ಡಾ|| ಅಲೆಕ್ಸಿಸ್ ಕೆರೆಲ್‌ರವರ ಅಭಿಪ್ರಾಯವೇ ಇದಕ್ಕೆ ಸಾಕ್ಷಿ



ಪೂರ್ವ -- ಪಶ್ಚಿಮ ಎಂಬ ರಾಷ್ಟ್ರಬೇದವಿಲ್ಲದೆ, ಹಿಂದು -- ಕ್ರೈಸ್ತ -- ಮುಸಲ್ಮಾನ -- ಎಂಬ ಮತದ ಮರ್ಮಗಳ ವ್ಯತ್ಯಾಸವಿಲ್ಲದೆ, ಗಂಡು - ಹೆಣ್ಣು ಎಂಬ ತಾರತಮ್ಯವಿಲ್ಲದೆ, ಅಂದು--ಇಂದು ಎಂಬ ಕಾಲ ಭೇದವಿಲ್ಲದೆ, ಎಲ್ಲೆಲ್ಲೂ--ಎಲ್ಲ ಸಂದರ್ಬಗಳಲ್ಲೂ, ಎಲ್ಲರಿಗೂ ಪ್ರಾರ್ದನೆಯು ಬದುಕಿಗೆ ಬಲ ಮತ್ತು ಬೆಳಕಾಗಿದೆ ಈ ಅನುಬವಸತ್ಯ ಪ್ರಾಚೀನಕಾಲದಲ್ಲಿ ಎಷ್ಟೊಂದು ಸತ್ಯವಾಗಿ ಜನಜೀವನದಲ್ಲಿ ಬೆಳಗಿತ್ತೋ ಅಷ್ಟೇ ಪೂರ್ಣಸತ್ಯವಾಗಿ ಈ ಆದುನಿಕಕಾಲದಲ್ಲೂ ಬೆಳಗುತ್ತಿದ

ಹೀಗೆ ಪ್ರಾರ್ದನೆಯು ಲೌಕಿಕ ಹಾಗೂ ಆದ್ಯಾತ್ಮಿಕ ಎಂಬೀ ಎರಡು ಕ್ಷೇತ್ರಗಳಲ್ಲೂ ಫಲಕಾರಿ, ಪ್ರಯೋಗಶೀಲರಿಗೆ, ಪ್ರಾಮಾಣಿಕರಿಗೆ ಎಲ್ಲರೀತಿಯಲ್ಲೂ ಅನುಭವ ಸಾದ್ಯ ಅಪ್ಪಟವೈಜ್ಞಾನಿಕವೆನಿಸಿದ ಈ ಪ್ರಾರ್ದನಾವಿದಾನ ನಿತ್ಯನೂತನ, ಬಾಳ ಚೇತನ ✪

ಮನುಷ್ಯನ ಎಲ್ಲ ದೋಷಗಳನ್ನು ತಕ್ಷಣ ದೂರ ಮಾಡಿ ಭಗವಂತನೆಡೆಗೆ ಆತನ ಮನಸ್ಸನ್ನು ಹರಿಯಿಸುವಲ್ಲಿ ಭಗವನ್ನಾಮಸ್ಮರಣೆಯ ಪಾತ್ರ ಅತಿ ಪ್ರಮುಖವಾದುದು ಸಕಲ ಯೋಗಸಾಧನಗಳ ಸಾರ ತತ್ವವೆಂದರೆ ಜಪಯೋಗವೇ ಎಂಬುದು ಹಲವು ಮಂದಿ ಸಂತಶ್ರೇಷ್ಠರ ಅಭಿಪ್ರಾಯ

ಜಕಾರೋ ಜನ್ಮವಿಚ್ಛೇದ
ಪಕಾರ ಪಾಪನಾಶಕ
ತಸ್ಮಾಜ್ಜಪ ಇತಿ ಪ್ರೋಕ್ತೊ
ಜನ್ಮಪಾಪವಿನಾಶಕ ||

ಅಂದರೆ, ಜನ್ಮ ವಿಚ್ಛೇದಕವೂ ಪಾಪನಾಶಕವೂ ಆದುದು 'ಜಪ', ಸಮಸ್ತ ಪಾಪಗಳ ನಿವಾರಣೆಗೈದು, ಪುನರ್ಜನ್ಮವನ್ನೂ ತಡೆಯುವ ಶಕ್ತಿ ಜಪ ಯೋಗಕ್ಕಿದೆಯೆಂದಾಯಿತು

'ಯಜ್ಞಾನಾಂ ಜಪಯಜ್ಞೋಽಸ್ಮಿ'

ಎನ್ನುವ ಮೂಲಕ ಶ್ರೀಕೃಷ್ಣನು ಜಪಯಜ್ಞದ ಪರಮಾತ್ಮಸ್ವರೂಪವನ್ನೂ ಸ್ಪಷ್ಟಪಡಿಸಿದ್ದಾನೆ

ಸರಿ, ಯಾವ ಹೆಸರಿನಿಂದ ಸರ್ವಜ್ಞನೂ, ಸರ್ವಶಕ್ತನೂ, ಸರ್ವಾಂತರ್ಯಾಮಿಯೂ ಆದ ಭಗವಂತನ ಜಪ ಮಾಡಬೇಕು?

ಈ ಪ್ರಶ್ನೆಗೆ ಕಠೋಪನಿಷತ್ತು ಹೀಗೆ ಉತ್ತರಿಸುತ್ತದೆ --

"ಸರ್ವೇ ವೇದಾ ಯತ್ಪದಮಾಮನಂತಿ
ತಪಾಂಸಿ ಸರ್ವಾಣಿ ಚ ಯದ್ ವದಂತಿ
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ
ತತ್ತೇ ಪದಂ ಸಂಗ್ರಹೇಣ ಬ್ರವೀಮ್ಯೋಮಿತ್ಯೇತತ್||"

"ಎಲ್ಲ ವೇದಗಳೂ ಯಾವ ಪದವನ್ನು ಮನನ ಮಾಡುತ್ತವೆಯೋ ಎಲ್ಲ ತಪಸ್ವಿಗಳೂ ಯಾವ ಪದದ ಕುರಿತು ಚರ್ಚೆ ನಡೆಸುವರೋ, ಯಾವುದರ ಇಚ್ಛೆಯಿಂದಾಗಿ ಬ್ರಹ್ಮಚರ್ಯಾದಿ ವ್ರತಗಳನ್ನು ಪಾಲಿಸುತ್ತಾರೋ, ಆ ಪದವನ್ನು ನಾನು ನಿನಗೆ ಸಂಕ್ಷಿಪ್ತವಾಗಿ ಹೇಳುತ್ತೇನೆ -- ಅದು 'ಓಂ' ಎಂಬುದಾಗಿದೆ"

ಓ ಮಿತ್ಯೇ ಕಾಕ್ಷರಂ ಬ್ರಹ್ಮ
ವ್ಯಾಹರನ್ಮಾಮನುಸ್ಮರನ್
ಯ ಪ್ರಯಾತಿ ತ್ಯಜನ್ದೇಹಂ
ಸ ಯಾತಿ ಪರಮಾಂ ಗತಿಮ್

# ಪ್ರಣವ ಜಪ

---ಪ್ರದ್ಯುಮ್ನ

"ಬ್ರಹ್ಮದ ಹೆಸರಾದ ಓಂ ಎಂಬ ಓಂದಕ್ಷರವನ್ನು ಉಚ್ಚರಿಸುತ್ತ, ನನ್ನನ್ನು ನೆನೆಯುತ್ತ ಯಾವನು ದೇಹವನ್ನು ಬಿಟ್ಟು ಹೊರಬೀಳುತ್ತಾನೂ ಅವನು ಪರಮಗತಿಯನ್ನು ಹೊಂದುತ್ತಾನೆ" ಎಂದು ಶ್ರೀಕೃಷ್ಣನು ಗೀತೆಯಲ್ಲಿ ಸಾರಿದ್ದಾನೆ

ಆದ್ದರಿಂದ ಪ್ರಣವ, ಉದ್ಗೀಥ, ತಾರ ಮುಂತಾದ ಹೆಸರುಗಳಿಂದಲೂ ಪ್ರಸಿದ್ಧವಾಗಿರುವ ಓಂಕಾರವು ಜಪಯೋಗದಲ್ಲಿ ಅತ್ಯುಚ್ಚ ಸ್ಥಾನವನ್ನು ಪಡೆದಿದೆ "ಪ್ರಾಣಾನ್ ಅವತಿ ಪ್ರಕಾಶೇನ ನವೀಕರೋತಿ ಇತಿ ಪ್ರಣವ" -- ಪ್ರಾಣಶಕ್ತಿಯ ಮೂಲಕ ಶರೀರವನ್ನು ಪ್ರಕಾಶದಿಂದ ಸತತವಾಗಿ ನವೀಕರಿಸುವುದೇ ಪ್ರಣವಮಂತ್ರ

ಪ್ರಣವದ ಸೂಕ್ಷ್ಮವಾದ ಅಭ್ಯಾಸ ಮಾಡುವವರು ಅದನ್ನು ಅಕಾರ, ಉಕಾರ, ಮಕಾರ ಮತ್ತು ಅನುಸ್ವಾರ (ಅರ್ಧಮಾತ್ರೆ) -- ಎಂಬುದಾಗಿ ವಿಂಗಡಿಸುತ್ತಾರೆ ( ಕೆಲವೆಡೆಗಳಲ್ಲಿ ಅ, ಉ, ಮ, ನಾದ, ಬಿಂದು, ಶಕ್ತಿ ಮತ್ತು ಶಾಂತಾಕಲಾ -- ಎಂಬುದಾಗಿ ಏಳು ಭಾಗಗಳನ್ನೂ ಹೆಸರಿಸಲಾಗಿದೆ ) ಅಕಾರವು



ಶರೀರದ ಮೂಲಾಧಾರದಿಂದ ನಾಭಿಪರ್ಯಂತ ವ್ಯಾಪಿಸಿ ರುದ್ರಗ್ರಂಥಿಯನ್ನು ಭೇದಿಸಿದರೆ, ಉಕಾರವು ನಾಭಿಯಿಂದ ಹೃದಯದವರೆಗೆ ವ್ಯಾಪಿಸಿ ವಿಷ್ಣುಗ್ರಂಥಿಯನ್ನು ಭೇದಿಸುವಂತೆ ಮಕಾರವು ಕಂಠದಿಂದ ಆಜ್ಞಾಚಕ್ರದವರೆಗ ವ್ಯಾಪ್ತವಾಗಿ ಬ್ರಹ್ಮಗ್ರಂಥಿಯ ಭೇದನಗೈಯುವಂತೆ ಕೊನೆಯ ಅರ್ಧಮಾತ್ರೆಯ ಸೂಕ್ಷ್ಮಧ್ವನಿಯಿಂದ ಆತ್ಮಸಾಕ್ಷಾತ್ಕಾರದ ಸ್ಥಿತಿಯೊದಗುತ್ತದೆ

ಅಕಾರೇ ರುಚಿತಂ ಪದ್ಮಂ
ಉಕಾರೇಣೈವ ಭಿದ್ಯತೇ
ಮಕಾರೇ ಲಭತೇ ನಾದಂ
ಅರ್ಧ ಮಾತ್ರಾ ತು ನಿಶ್ಚಲಾ

"ಅಕಾರದಿಂದ ಸ್ಫುಟವಾಗುವ ಹೃತ್ಕಮಲವು ಉಕಾರದಿಂದ ಭೇದಿಸಲ್ಪಡುತ್ತದೆ ಮಕಾರದಿಂದ ನಾದಸಿದ್ಧಿಯುಂಟಾದರೆ, ಅರ್ಧ ಮಾತ್ರೆಯಿಂದ ನಿಶ್ಚಲತೆ ಬರುತ್ತದೆ" ಎಂಬುದು ಉಪನಿಷತ್ತಿನ ಹೇಳಿಕೆ

ಕೊನೆಯಲ್ಲಿನ ಅರ್ಧಮಾತ್ರೆಯ ಉಚ್ಚಾರದ ಕುರಿತು ಹೀಗೆನ್ನಲಾಗಿದೆ

ಶಿಖಾ ತು ದೀಪಸಂಕಾಶಾ
ತಸ್ಮಿನ್ನುಪರಿ ವರ್ತತೇ
ಅರ್ಧಮಾತ್ರಾ ತದಾ ಜ್ಞೇಯಾ
ಪ್ರಣವಸ್ಯೋಪರಿ ಸ್ಥಿತಾ

"ದೀಪದ ಜ್ವಾಲೆಯ ಹಾಗೇ, ಅರ್ಧಮಾತ್ರೆಯೂ ಪ್ರಣವದ ಮೇಲ್ಭಾಗದಲ್ಲಿ ಸ್ಥಿತವಾಗಿದೆ ಅದರ ಉಚ್ಚಾರಣೆ ತಾರಸ್ವರ ರೂಪದಲ್ಲಾಗುವುದರಿಂದ ತಾರವೆಂಬ ಹೆಸರೂ ಅದಕ್ಕಿದೆ"

ಕಾಂಸ್ಯಘಂಟಾ ನಿನಾದಸ್ತು
ಯದಾ ಲೀಯತಿ ಶಾಂತಯೇ
ಓಂಕಾರಸ್ತು ತದಾ ಯೋಜ್ಯ
ಶಾಂತಯೇ ಸರ್ವಮಿಚ್ಛತಾ

'ಯಾವ ರೀತಿ ಕಂಚಿನ ಗಂಟೆಯ ಧ್ವನಿ ಮೆಲ್ಲಮೆಲ್ಲನೆ ಕಡಿಮೆಯಾಗಿ ವಿಲೀನವಾಗಿಬಿಡುತ್ತದೋ,

ಅದೇ ರೀತಿ ಎಲ್ಲ ಇಷ್ಟಾರ್ಥಗಳ ಪ್ರಾಪ್ತಿಗಾಗಿ ಓಂಕಾರದ ಪ್ರಯೋಗ ಆಗದ ಕು' ಎಂಬುವಾಗಿ ಓಂಕಾರದ ಉಚ್ಚಾರಣೆಯ ಕ್ರಮವನ್ನು ತಿಳಿಸಲಾಗಿದೆ

ತೈಲಧಾರಾಮವಿಚ್ಛಿನ್ನಾ
ದೀರ್ಘಘಂಟಾನಿನಾದಮ್
ಅವಾಚ್ಯಂ ಪ್ರಣವಸ್ಯಾಗ್ರಂ
ಯಸ್ತಂ ವೇದ ಸ ವೇದವಿತ್

ತೈಲದ ಅವಿಚ್ಛಿನ್ನಧಾರೆಯ ಹಾಗೆ ಅಥವಾ ಘಂಟಾನಾದದ ಸುದೀರ್ಘ, ನಿರಂತರ ಧ್ವನಿಯ ಹಾಗೆ ಪ್ರಣವದ ಅಗ್ರ ಅರ್ಧಮಾತ್ರೆಯೂ ವಾಚಿಸಲು ಅಸಾಧ್ಯವಾದುದೆಂದು ಹೇಳಲಾಗುತ್ತದೆ

ಪ್ರಣವದ ಉಚ್ಚಾರಣೆಯಲ್ಲಿ ಮೂರು ವಿಧಗಳಿವೆ ಹ್ರಸ್ವ (ಓಮೋಮೋಮ್ ಎಂಬುದಾಗಿ), ದೀರ್ಘ (ಓಂ ಓಂ ಓಂ) ಮತ್ತು ಪ್ಲುತ (ಓ ಮ್, ಓ ಮ್ ಓ ಮ್) - ಎಂಬುವಾಗಿ ಈ ಮೂರು ರೀತಿಯ ಜಪಗಳಿಗೂ ಮೂರು ವಿಬಿನ್ನ ರೀತಿಯ ಫಲಗಳು ಹೇಳಲ್ಪಟ್ಟಿವೆ

ಯದಿ ಹ್ರಸ್ವಾ ಬವತಿ,
ಸರ್ವಂ ಪಾಪಾನಾಂ ದಹತ್ಯಮೃತತ್ವಂ ಚ ಗಚ್ಛತಿ
ಯದಿ ದೀರ್ಘಾ ಬವತಿ,
ಮಹತೀಂ ಶ್ರಿಯಮಾಪ್ನೋತ್ಯಮೃತತ್ವಂ ಚ ಗಚ್ಛತಿ
ಯದಿ ಪ್ಲುತಾ ಬವತಿ,
ಜ್ಞಾನವಾನ್ ಬವತ್ಯಮೃತತ್ವಂ ಚ ಗಚ್ಛತಿ

"ಓಂಕಾರದ ಹ್ರಸ್ವೋಚ್ಚಾರಣೆಗೈದರೆ, ಸರ್ವ ಪಾಪ ನಾಶವಾಗಿ ಅಮೃತತ್ವ ದೊರೆಯುತ್ತದೆ ದೀರ್ಘೋಚ್ಚಾರಣೆ ಮಾಡಿದರೆ ಧನ- ಧಾನ್ಯವೈಬವ ಸಂಪನ್ನನಾಗಿ ಅಮೃತತ್ವವನ್ನು ಹೊಂದುತ್ತಾನೆ ಪ್ಲುತೋಚ್ಚಾರಣೆ ಮಾಡಿದರೆ ಜ್ಞಾನಿಯಾಗಿ ಅಮೃತತ್ವವನ್ನು ಪಡೆಯುತ್ತಾನೆ" ಎಂಬುದಾಗಿ ಒಂದು ಉಪನಿಷತ್ತು ಹೇಳಿವರೆ, ಇನ್ನೊಂದರಲ್ಲಿ,

ಹ್ರಸ್ವೋ ದಹತಿ ಪಾಪಾನಿ
ದೀರ್ಘ ಸಂಪತ್ಪ್ರದೋಽವ್ಯಯ
ಅರ್ಧಮಾತ್ರಾ ಸಮಾಯುಕ್ತ
ಪ್ರಣವೋ ಮೋಕ್ಷದಾಯಕ

ಹ್ರಸ್ವ ಉಚ್ಚಾರಣೆಯಿಂದ ಪಾಪ ಪರಿಹಾರವೂ, ದೀರ್ಘೋಚ್ಚಾರಣೆಯಿಂದ ಅಕ್ಷಯ ಸಂಪತ್ತಿನ ಲಾಬವೂ, ಪ್ಲುತೋಚ್ಚಾರಣೆಯಿಂದ ಮೋಕ್ಷಪ್ರಾಪ್ತಿಯೂ ಆಗುತ್ತದೆ ಎಂದು ವಿವರಿಸಲಾಗಿದೆ

ಆಮ್ನಾಯವಾಚಾಮತಿದೂರಮಾದ್ಯಂ
ವೇದ್ಯಂ ಸ್ವಸಂವೇದ್ಯ ಗುಣೇನ ಸಂತ
ಆತ್ಮಾನಮಾನಂದ ರಸೈಕಸಿಂದುಂ
ಪಶ್ಯಂತಿ ತಾರಾತ್ಮಕಮಾತ್ಮನಿಷ್ಠಾ

'ಯೋಗಿಗಳು ಆತ್ಮನಿಷ್ಠರಾಗಿಯೇ, ಪ್ರಣವಸ್ವರೂಪಿ ಆನಂದರಸ ಸಮುದ್ರವಾದ ಆತ್ಮವನ್ನು ಅರಿಯಬಲ್ಲವರಾಗುತ್ತಾರೆ ಅದು ಸ್ವಗುಣ ಸಂವೇದ್ಯವೂ, ಶಬ್ದಗಳಿಂದ ಅತೀತವಾದುದೂ, ವೇದವಾಣಿಯಿಂದಲೂ ಅಗಮ್ಯವಾದಂದದೂ ಆಗಿದೆ' ಇದು ಉಪನಿಷತ್ತಿನ ಮಾತು

ಪ್ರಣವೋ ದನು ಶರೋಹ್ಯಾತ್ಮಾ
ಬ್ರಹ್ಮ ತಲ್ಲಕ್ಷ್ಯಮುಚ್ಯತೇ
ಅಪ್ರಮತ್ತೇನ ವೇದ್ಧವ್ಯಂ
ಶರವತ್ತನ್ಮಯೋ ಭವೇತ್

ಪ್ರಣವವನ್ನು ದನುಸ್ಸಾಗಿಯೂ, ಆತ್ಮವನ್ನು ಬಾಣವನ್ನಾಗಿಯೂ ಮಾಡಿ ಬ್ರಹ್ಮರೂಪೀ ಲಕ್ಷ್ಯವನ್ನು ಪ್ರಮಾದರಹಿತವಾಗಿ ವೇದಿಸಬೇಕು ಆಗ, ಯಾವ ರೀತಿ ಬಾಣವು ತನ್ನ ಲಕ್ಷ್ಯದೊಡನೆ ಒಂದಾಗುತ್ತದೋ ಅದೇ ರೀತಿ ಆತ್ಮವು ಬ್ರಹ್ಮನಲ್ಲಿ ಲೀನವಾಗುತ್ತದೆ" - ಎಂಬ ಮಾತು ಎಷ್ಟು ಅರ್ಧಪೂರ್ಣವಾಗಿ ಪ್ರಣವದ ಶ್ರೇಷ್ಠತೆಯನ್ನು ಪ್ರತಿಬಿಂಬಿಸುತ್ತದೆ!



# ಗಾಯತ್ರೀ

--ದೇಶಕುಲಕರ್ಣಿ ರಾಮಕೃಷ್ಣರಾವ್

ಸರ್ವಮಾನವರೂ ಸೂರ್ಯನ ಉಪಾಸಕರು ಅಷ್ಟೇಕೆ -- ಕಮಲಪುಷ್ಪ ಸೂರ್ಯಕಾಂತಿ ಇತ್ಯಾದಿ ಓಷಧಗಳು ಸೂರ್ಯಾವಲಂಬಿಗಳು ಸೂರ್ಯನನ್ನು ವೇದಗಳಲ್ಲಿ ಚರಾಚರ ಜಗತ್ತಿನ ಸ್ಥಿತಿಗಳಿಗೆ ಚೈತನ್ಯದಾಯಕನಾಗಿದ್ದಾನೆ ಎಂದು ಹೊಗಳಿದೆ ಸ್ಮೃತ್ಯಾದಿ ಪ್ರಮಾಣಗಳಿಂದ ಸೂರ್ಯನು ಜಗತ್ತಿನ ಸೃಷ್ಟಿಮತ್ತು ವಿಕಾಸಕ್ಕೆ ಕಾರಣವೆಂದು ಹೇಳಲಾಗಿದೆ

ಅವನೇ ಬ್ರಹ್ಮಾಂಡಕ್ಕೆ ಆದಿ- "ಆದಿತ್ಯ" ವಿಶ್ವದ ತೇಜಸ್ಸೆಲ್ಲ ಆತನದೆ ಆದ್ದರಿಂದ ಅವನು ಭಾಸ್ಕರ ಅವನೆ ಗ್ರಹಮಂಡಲದ ನಾಯಕ ಆರೋಗ್ಯವನ್ನು ಬಯಸುವವನು ಸೂರ್ಯನನ್ನು ಆರಾದಿಸಬೇಕು ನಿತ್ಯವು ಸೂರ್ಯನಮಸ್ಕಾರ ಮಾಡಬೇಕು

ಜಂತುವು ಮಾತೃಗರ್ಭದಿಂದ ಹೊರಕ್ಕೆ ಬರಬೇಕಾದರೆ ಸೂರ್ಯನ ಅನುಗ್ರಹಬೇಕು ಆದ್ದರಿಂದಲೇ ಅವನು "ಸವಿತೃ" ದೇವ ಎನ್ನಿಸಿದ್ದಾನೆ ಒಂದು ಕಾಲದಲ್ಲಿ ಸವಿತೃದೇವನಪೂಜೆ ವ್ಯಾಪಕವಾಗಿತ್ತು ಈಗಲು ಸೂರ್ಯಾರಾಧನೆ ನಡೆಯುತ್ತಿದೆ

ಅಗ್ನಿಯೇ "ಪುರುಷ" ಸೋಮನೆ "ಪ್ರಕೃತಿ" ಪ್ರಕೃತಿ ಮತ್ತು ಪುರುಷರ ಮೂಲಸ್ಥಾನವಾದ ಅಗ್ನಿ ಸೋಮಮಂಡಲದ ಯಜಮಾನ "ಸವಿತೃದೇವ" ಅಂದಮೇಲೆ ಸವಿತೃದೇವನು ಎಲ್ಲಾ ಜೀವಿಗಳ ಆರಾಧ್ಯಮೂರ್ತಿ ಯೆಂದಾಯಿತು ಸವಿತೃದೇವನ ತೇಜಸ್ಸು ಎಲ್ಲಾ ಪ್ರಾಣಿಗಳಲ್ಲಿಯೂ ಇದ್ದು ಮನಸ್ಸನ್ನು ಮತ್ತು ಬುದ್ದಿಯನ್ನು ಕಾರ್ಯೋನ್ಮುಖವಾಗುವಂತೆ ಪ್ರಚೋದಿಸುವುದು

ಇಂತಹ ಸರ್ವಶ್ರೇಷ್ಠ ತೇಜೋರಾಶಿಯ ಆರಾದನೆಯನ್ನು ವಿಶ್ವಾಮಿತ್ರಮಹರ್ಷಿಯು ಲೋಕಕ್ಕೆ ತಿಳಿಸಿಕೊಟ್ಟು "ಲೋಕೋದ್ಧಾರಕ" ನಾದನು ವಿಶ್ವಕ್ಕೆ ಮಿತ್ರನಾದನು

ಮೇಲೆ ಹೇಳಿದ ತತ್ವ "ಶ್ರೀ ಗಾಯತ್ರಿ" ಯಲ್ಲಿದೆ ಇಂದ್ರಿಯಗಳನ್ನು ಮನೋಬುದ್ಧಿಗಳು ಪ್ರೇರಿಸುವುವು. ಆ ಮನೋಬುದ್ಧಿಗಳ ಪ್ರೇರಕನೇ "ಸವಿತೃದೇವ"

ಆ ಸವಿತೃದೇವನ ರೂಪವೇ ಆದ ಸೂರ್ಯನಿಂದ ಹೊರಟ ಅಹ ಕಿರಣವು ಭೂಮಿಯನ್ನು ಸ್ಪರ್ಶಿಸಿದಾಗ "ಪ್ರಾತ ಸಂಧ್ಯೆ" ನಿಶಾಕಿರಣವು ಸ್ಪರ್ಶಿಸಿದಾಗ "ಸಾಯಂ ಸಂಧ್ಯೆ" ಈ ಸಂಧ್ಯೆಗಳು ಜಗತ್ತಿನ ಗಡಿಯಾರಗಳು

ಸಂಧ್ಯಾಸಮಯದಲ್ಲಿ ಮಾನವನು ದೇಹವನ್ನು ಶುದ್ಧಿಮಾಡಿಕೊಂಡು ಜಗತ್ತಿಗೇ ಆತ್ಮಸ್ವರೂಪನಾದ ಸೂರ್ಯನಿಂದ ಶ್ರೀಗಾಯತ್ರಿಯನ್ನು ಆಕರ್ಷಿಸಿಕೊಂಡು, ತನ್ನ ಹೃದಯದಲ್ಲಿ ದಾರಣ ಮಾಡಿ "ಸವಿತೃದೇವ" ಆ ತೇಜೋರಾಶಿಯನ್ನು ಆರಾದನೆಮಾಡಿ, ತನ್ನ ಶ್ರೇಯಸ್ಸನ್ನು ಸಾದಿಸಿಕೊಳ್ಳುವುದೇ ಸಂಧ್ಯಾವಂದನೆಯ ಮುಖ್ಯ ತತ್ವ ಮತ್ತು ಗುರಿ ಈ ರಹಸ್ಯವನ್ನು ಬಲ್ಲವರೇ ಆರ್ಯರು

[illegible] ನಮಗೆ ದಯಪಾಲಿಸಿರುವ ಸಂಪದ್ಭರಿತವಾದ ಸನಾತನ ಸಂಸ್ಕೃತಿಯು ಕೇವಲ ಮೂಢ ನಂಬಿಕೆಯಲ್ಲ ಡಂಭಾಚಾರವಲ್ಲ ವಿಚಾರಮಾಡಿದರೆ ನಾಸ್ತಿಕರೂ ಇದನ್ನು ಸಮ್ಮತಿಸಬೇಕಾಗುತ್ತದೆ

ಪಠಂತಿ ವೇದಶಾಸ್ತ್ರಾಣಿ
ಜನಾ ವಾದಯಂತಿ ಪರಸ್ಪರಮ್
ನ ಜಾನಾಂತಿ ಪರಂತತ್ತ್ವಂ,
ದರ್ವೀ ಪಾಕರಸಂಯದಾ

ಪರತತ್ವವನ್ನು ತಿಳಿಯಬೇಕಾದರೆ ವಿಶೇಷಜ್ಞಾನ ಅತಿ ಅವಶ್ಯಕ ಸಂಧ್ಯಾವಂದನೆಯ ಪ್ರತಿ ಮಂತ್ರದ ಹಿಂದೆ ಅಡಗಿರುವ ಪರಮ ತತ್ವವನ್ನು ವಿಶೇಷ ದೃಷ್ಟಿಯಿಂದ ವಿಚಾರಮಾಡಿನೋಡಿದರೆ ಅದರ ಮಹ



# 'ಗಾಯತ್ರೀ'ಯ ಮಹಿಮೆ

"ಗಾಯತ್ರೀ" ಎಂದರೇನೇ, ಈ ಮಂತ್ರವನ್ನು ಪ್ರತಿನಿತ್ಯವೂ ನಿಯಮಿಸಿರುವಂತೆ ಜಪಿಸುವವರನ್ನು ಎಲ್ಲಾ ವಿಧದಲ್ಲೂ, ಎಲ್ಲಾ ಸಮಯದಲ್ಲೂ ರಕ್ಷಿಸುವ ದೈವವೆಂದು ಹೆಸರು ಇಲ್ಲಿ ಮಂತ್ರವೇ ದೈವವಾಗುವುದು ಹಲವಾರು ಗಾಯತ್ರೀಗಳುಂಟು ಆಯಾಯ ಮುಖ್ಯ ವೈದೀಕ ದೇವತೆಗಳಿಗೆ, ಆಯಾಯಾ ದೇವತೆಗಳ ರೂಪಕ್ಕೆ ತಕ್ಕಂತೆ ಗಾಯತ್ರೀ ಉಂಟು ಆದರೂ ಸಾಮಾನ್ಯವಾಗಿ ಈ ಗಾಯತ್ರೀ ಎಂಬುದು 'ಸೂರ್ಯಗಾಯತ್ರೀ'ಯನ್ನೇ ಹೇಳುವುದು ಮಹರ್ಷಿ ವಿಶ್ವಾಮಿತ್ರರು ಈ ಗಾಯತ್ರೀಯ ಆಚಾರ್ಯರು ಈ ಮಂತ್ರದ ಅಧಿಷ್ಠಾನ ದೇವತೆ 'ಸವಿತಾ' ಎಂಬ ಸೂರ್ಯ ಮಾನವ ಜನ್ಮತಾಳಿದ ಪ್ರತಿಯೊಬ್ಬರಿಗೂ ಶಾರೀರಿಕಬಲ, ಮನೋಬಲ, ಬುದ್ಧಿಬಲ, ಆತ್ಮಬಲ ಎಂಬುವು ಬಹು ಅವಶ್ಯಕ ಇವೆಲ್ಲವೂ ದೊರಕದೇ ಕದರೆ ಗಾಯತ್ರೀ ಮಂತ್ರವನ್ನು ವಿದಿ, ನಿಯಮಕ್ಕನುಸಾರವಾಗಿ ಜಪಿಸಿ ಸಿದ್ಧಿ ಪಡೆಯಬೇಕು

ಬ್ರಹ್ಮಾಸ್ತ್ರವೆಂಬ ಎಣೆಯಿಲ್ಲದ ಅಸ್ತ್ರಕ್ಕೆ ಗಾಯತ್ರೀಮಂತ್ರ ಆಧಾರವಾಗುವುದು 'ಬ್ರಹ್ಮತೇಜೋ ಬಲಂ ಬಲಂ' ಎನ್ನುತ್ತಾರೆ ವಿಶ್ವಾಮಿತ್ರ ಮಹರ್ಷಿಗಳು ಇದರ ಶಕ್ತಿ ಜಪಿಸುವವನನ್ನು ತ್ರಿಕಾಲ ಜ್ಞಾನಿಯನ್ನಾಗಿಸುತ್ತದೆ 'ಗಾಯತ್ರೀ ಮಂತ್ರಕ್ಕೆ ಮಿಗಿಲಾದ ಮಂತ್ರ ಮತ್ತೊಂದಿಲ್ಲ ತಾಯಿಗೆ ಮಿಗಿಲಾದ ದೇವರಿಲ್ಲ' ಎಂಬ ಉಕ್ತಿ ಸತ್ಯವಾದದ್ದೇ ಹೌದು

ಈ ಮಂತ್ರ ವೇದಗಳಿಗೆ ಆತ್ಮದಂತೆ ವೇದದ ಅಸ್ತಿಭಾರ ನಾದವೇ ಈ ಗಾಯತ್ರೀ ಮಂತ್ರ ಇದನ್ನು ಎರಡು ಲಕ್ಷಸಲ ನಿಯಮಕ್ಕನುಸಾರವಾಗಿ ಜಪಿಸಿದರೆ ಅದಕ್ಕೆ 'ಪ್ರಚ್ಛಾರಣ'ವೆಂದು ಹೇಳುತ್ತಾರೆ ಶ್ರೀ ವಿದ್ಯಾರಣ್ಯರು, ಶ್ರೀ ಮಧುಸೂದನ ಸರಸ್ವತಿ ಮೊದಲಾದ ಮಹಾತ್ಮರು ಗಾಯತ್ರೀಯ ಪ್ರಚ್ಛಾರಣದಿಂದ ದೇವರ ಪ್ರತ್ಯಕ್ಷ ದರ್ಶನಮಾಡಿದ್ದಾರೆಂದು ಹೇಳುವುದುಂಟು ವಸಿಷ್ಠ ಮಹರ್ಷಿಗಳ ಮಹಿಮೆಗೆ ಅಡಿಪಾಯವೇ ಗಾಯತ್ರೀ ಮಂತ್ರವು. ಮೊಗಲರ ರಾಜನಾದ ಅಕ್ಬರನೂ ಇದರ ಮಹಿಮೆಯನ್ನರಿತು ನಡೆದುಕೊಂಡನೆಂದು ಚರಿತ್ರೆ ಹೇಳಿದೆ

ಗಾಯತ್ರೀ ಮಂತ್ರದ ಧ್ಯಾನ ಶ್ಲೋಕವಾದ 'ಮುಕ್ತಾವಿದ್ರುಮ' ಎಂಬುದು ಮನದಟ್ಟಾಗುವಂತಹದು ಗಾಯತ್ರೀ ದೇವಿಯ ಶ್ರೀಮುಖ, ಹವಳ, ಮುತ್ತು, ಸುವರ್ಣ, ನೀಲ, ಶ್ವೇತ ಎಂದು ಪಂಚವರ್ಣದಲ್ಲಿದೆ ಗಾಯತ್ರೀ ಮುಕ್ಕಣ್ಣುಳ್ಳವಳು ಚಂದ್ರಕಲೆಯೊಂದಿಗೆ ಕಿರೀಟ ಧರಿಸಿದ್ದಾಳೆ ತತ್ವವನ್ನರಿಯುವಂತೆ ಮಾಡುವ ಅಕ್ಷರ ಸ್ವರೂಪವುಳ್ಳವಳು ವರದ ಮುದ್ರೆ -- ಅಭಯ ಮುದ್ರೆಯ ಕರಗಳೊಂದಿಗೆ ಅಂಕುಶ, ಚಾವಟಿ, ಕಪಾಲ, ರಜ್ಜು, ಶಂಖ -- ಚಕ್ರಗಳನ್ನು ಎರಡು ತಾವರೆಯ ಹೂವನ್ನು ಉಳಿದ ಕರಗಳಲ್ಲಿ ಧರಿಸಿದ್ದಾಳೆ

ಗಾಯತ್ರೀ ಮಂತ್ರದ ಜಪಕ್ಕೆಮೊದಲು ಗಾಯತ್ರೀ ಆವಾಹನ ಮಂತ್ರವಾದ 'ಆಯಾತು ವರದಾ ದೇವಿ' ಎಂಬ ಮಂತ್ರವನ್ನು ಹೇಳಬೇಕು 'ಪ್ರಪಂಚ ಮಾತೆಯೇ ! ಗಾಯತ್ರೀ ದೇವಿಯೇ ! ನಿನ್ನನ್ನು ಜಪಿಸುವವರಿಗೆ ಸತ್ಫಲ ಪ್ರಸೂತಳಾಗಿರುವೆ ನೀನು ಸತ್ಯಳು ವೇದಾಂತಗಳಿಂದ ಮಾತ್ರವೇ ನಿನ್ನನ್ನು ಅರಿಯಲು ಸಾಧ್ಯ ವೇದಗಳಿಗೇ ಮಾತೆ ನೀನು ಅಂತಹವಳಾದ ನೀನು ನಾನಿರುವ ಸ್ಥಳಕ್ಕೆ ಬರುವಂತಹವಳಾಗಬೇಕು ಎಲ್ಲಾ ಅಕ್ಷರಗಳ ರೂಪವೇ ಸರಸ್ವತೀ ಆ ಸರಸ್ವತಿ ನೀನೇ ನಾನು ಜಪಿಸುವ ಈ ಗಾಯತ್ರೀ ಮಂತ್ರವನ್ನು ಕರುಣಾಪೂರಿತಳಾಗಿ ಸ್ವೀಕಾರಮಾಡಬೇಕು !

ಮಹರ್ಷಿಗಳು, ಅವರ ಮುಖಾಂತರ, ಭಾರತ ದೇಶದ ಮಕ್ಕಳಾದ ನಮಗೆ ಸಿಕ್ಕಿರುವ ಮಹಾಭಾಗ್ಯ ಈ ಗಾಯತ್ರೀ ಎಂಬುದರಲ್ಲಿ ಸಂದೇಹವೇ ಇಲ್ಲ

'ಓಂ ತತ್ ಸವಿತುರ್ವರೇಣ್ಯಂ
ಭರ್ಗೋ ದೇವಸ್ಯ ಧೀಮಹಿ
ಧಿಯೋ ಯೋ ನ ಪ್ರಚೋದಯಾತ್

(ಆಧಾರ ಸೂರ್ಯಗಾಯತ್ರೀ ಮಂತ್ರ)

✪

**ಕಲ್ಯಾಣಮೂರ್ತಿರಾಮನಾದಪುರ**

ತ್ವವು ನಮಗೆ ತಿಳಿಯುವುದು ಸಂಧ್ಯಾವಂದನೆಯ ಮಂತ್ರವೆಲ್ಲವೂ ಸೂರ್ಯನನ್ನೇ ಕೇಂದ್ರೀಕರಿಸಿಕೊಂಡಿದೆ ಸೂರ್ಯನನ್ನು ವಂದಿಸಿ ಅವನ ನಿತ್ಯಕೃಪೆಯಿಂದ ದುಷ್ಪರಿಣಾಮಗಳನ್ನು ನಿವಾರಿಸಿಕೊಂಡು ಉತ್ತಮ ಪ್ರಭಾವವನ್ನು, ತೇಜಸ್ಸನ್ನು ಪಡೆದುಕೊಳ್ಳುವುದೇ ನಿತ್ಯ ಸಂಧ್ಯಾವನೆಯ ತತ್ವ. ಇದರಿಂದ "ದೈಹಿಕ" "ಮಾನಸಿಕ ಕ್ರಿಯ" ವೃದ್ಧಿಯಾಗುತ್ತದೆ

"ರವಿ ಜಗತ್ತಿನ ಚಕ್ಷು" ಅವನಿಲ್ಲದಿದ್ದರೆ ಇಡಿ ವಿಶ್ವವೇ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತದೆ ಜಗತ್ತಿನ ಸರ್ವಜೀವಿಗಳ ಉತ್ಪತ್ತಿ, ನಾಶಗಳಿಗೆ ರವಿಯೇ ಮೂಲಕಾರಣ ಈ ರಹಸ್ಯವನ್ನರಿತ ಋಷಿಗಳು, ಮಾನವ ಅಭ್ಯುದಯಕ್ಕೆ ಸೂರ್ಯಾರಾದನ ರೂಪವಾದ ಕೆಲವು ಸದಾಚಾರಗಳನ್ನು ರೂಪಿಸಿದರು ಮತ್ತು ವಿದಿಸಿದರು ಅದರಲ್ಲಿ ಈ ಸಂಧ್ಯಾವಂದನೆಯು ಮುಖ್ಯವಾದುದು ಈ ಸೂರ್ಯೋಪಾಸನೆಯು ಕೇವಲ ಒಂದು ಕೋಮಿಗೆ ಮಾಸಲಾದುದಲ್ಲ ಎಲ್ಲಾಜನಾಂಗದವರೂ ಸೂರ್ಯನನ್ನು ಆರಾದಿಸುತ್ತಾ ಬಂದಿದ್ದಾರೆ ಆಚರಣೆಯ ಕ್ರಮ ಬಿನ್ನವಾಗಿರಬಹುದು ಅಷ್ಟೆ.

ಸಂಧ್ಯಾವಂದನೆಯ ಆಚರಣೆ ಕುರಿತು ವೈಜ್ಞಾನಿಕವಾಗಿ ನಾವು ವಿಶ್ಲೇಷಿಸಿದರೆ ನಮ್ಮ ಋಷಿಗಳು ಎಂತಹ ಜ್ಞಾನಿಗಳು ಎಂಬುದು ಮತ್ತು ಶಾಸ್ತ್ರ ವಿದ್ಯೆಯಲ್ಲಿ ಎಷ್ಟುಪರಿಣಿತರಾಗಿದ್ದರೆನ್ನುವುದು ವ್ಯಕ್ತವಾಗುತ್ತದೆ

ಮನುಷ್ಯಜೀವನದಲ್ಲಿ ಜನ್ಮಾದ್ರಾರಭ್ಯ ಏಳುವರುಷಕ್ಕೊಮ್ಮೆ ದೈಹಿಕವಾಗಿಯೂ, ಮಾನಸಿಕವಾಗಿಯು, ಬದಲಾವಣೆಯಾಗುತ್ತದೆ ಇದು ಪ್ರಕೃತಿಯನಿಯಮ ಬಾಲಕನಿಗೆ ಎಂಟನೆಯ ವರ್ಷಪ್ರಾರಂಭವಾದಾಗ ಅವನ ವಿಷಯಗ್ರಹಣ ಶಕ್ತಿ ಪ್ರಬಲವಾಗುವುದು ಆದ್ದರಿಂದಲೇ ಈ ವಯಸ್ಸಿನಲ್ಲಿಯೇ ಉಪನಯನ ಸಂಸ್ಕಾರವನ್ನು ಕಡ್ಡಾಯವಾಗಿ ವಿದಿಸಿದರು ಮನ ಶಾಸ್ತ್ರದ ಪ್ರಾಕಾರ ಈ ವಯಸ್ಸು ವಿದ್ಯಾರ್ಜನೆಗೆ ಅತ್ಯಂತ ಯೋಗ್ಯವಾದಕಾಲ ಈ ವಯಸ್ಸಿನಲ್ಲಿ ಉಪನೀತನಾದ ವಟು ಶ್ರದ್ಧೆಯಿಂದ ಪ್ರತಿದಿನ ಸಂಧ್ಯವಂದನೆ ಮಾಡುತ್ತಾ ಗಾಯತ್ರಿಯನ್ನು ಈ ಮಂತ್ರದಿಂದ ಆಹ್ವಾನಿಸುತ್ತಾನೆ

"ಆಯಾತು ವರದಾದೇವಿ
ಅಕ್ಷರಂ ಬ್ರಹ್ಮಸಮ್ಮಿತಂ
ಸಂಧ್ಯಾವಿದ್ಯೇಸರಸ್ವತಿ

ಈ ಮಂತ್ರದ ಅರ್ಥ ಹೀಗಿದೆ ಶ್ರೀ ಗಾಯಿತ್ರಿ ಉಪಾಸಕರಿಗೆ ಇಷ್ಟಾರ್ಥಪ್ರದಳು ಆ ದೇವಿಯ

ಆರಾದನೆಯಿಂದ ಹಗಲು ಮಾಡಿದ ಪಾಪವು ಹಗಲಿನಲ್ಲಿಯೂ ರಾತ್ರಿಯಲ್ಲಿ ಮಾಡಿದ ಪಾಪವು ರಾತ್ರಿಯಲ್ಲಿಯೂ ಕಳೆದುಹೋಗುತ್ತದೆ

ನಿವೃತ್ತಿಮಾರ್ಗದರ್ಶಿನಿಯಾದ ಶ್ರೀ ಗಾಯತ್ರಿಯು ಮುಕ್ತಿಪ್ರದಳು "ಓಜೋಸಿ ತೇಜೋಸಿ ಆವಾಹಯಾಮಿ" ಇದು ಗಾಯತ್ರಿಯನ್ನು ತನ್ನಲ್ಲಿ ಆವಾಹನೆಮಾಡಿಕೊಳ್ಳುವ ಯಂತ್ರ.

ವೇದಮಾತೆಯಾದ ಶ್ರೀ ಗಾಯತ್ರಿಯೇ, ನೀನು ಇಂದ್ರಿಯಗಳ ಸೂಕ್ಷ್ಮಶಕ್ತಿಸ್ವರೂಪಳಾಗಿರುವೆ ಶತ್ರುವನ್ನು ನಿಗ್ರಹಿಸುವ ಸಾಮರ್ಥ್ಯವನ್ನುಳ್ಳವಳು "ಜ್ಞಾನ ದೀವಿಗೆ"ಯನ್ನು ಪ್ರಜ್ವಲಿಸುವಳು ಸ್ಥಾವರಜಂಗಮಾತ್ಮಕವಾದ ಜಗದ್ರೂಪಳು ನೀನು ನಿನ್ನ ಸಕಲ ಶಕ್ತಿಗಳನ್ನು ನನ್ನಲ್ಲಿ ಆವಾಹನೆಮಾಡಿಕೊಳ್ಳುತ್ತೇನೆ ನನ್ನ ಮಾನಸ ಕಲ್ಮಷಗಳು ನಾಶವಾಗುವಂತೆ ದಯವಿಟ್ಟು ನನ್ನನ್ನು ಅನುಗ್ರಹಿಸು, ಎಂದು ಭಕ್ತಿಯಿಂದ ಶ್ರದ್ಧೆಯಿಂದ ಪ್ರಾರ್ಥಿಸಿ 'ಗಾಯತ್ರಿ'ಯನ್ನು ಆವಾಹನೆಮಾಡಿಕೊಳ್ಳಬೇಕು ಶ್ರೀ ಗಾಯತ್ರೀ ದೇವಿಯನ್ನೇ ಸದ್ಗುರುವೆಂದು ತಿಳಿದು ಆಕೆಯಲ್ಲಿರುವ ಸಕಲ ಶಕ್ತಿಯನ್ನು ನಾವು ಪಡೆಯಬೇಕು

## *ಶ್ರೀ ಗಾಯತ್ರಿಯ ನೆಲೆ*

ಪರಾಶಕ್ತಿಯಾದ ಶ್ರೀ ಗಾಯತ್ರಿಯು ಸೂರ್ಯಾಂತರ್ಗತಳಾಗಿರುವಳು ಸೂರ್ಯ ಅಧಿದೇವತೆ ಗಾಯತ್ರಿ ಪ್ರದಾನದೇವತೆ ಗಾಯತ್ರೀದೇವಿಯ (ಅಸ್ತಿತ್ವವನ್ನು) ಇರುವಿಕೆಯನ್ನು ಪ್ರಕಾಶಪಡಿಸುವವನು ಸೂರ್ಯದೇವ

ತತ್ಸವಿತುರ್ವರೇಣ್ಯಂ
ಭರ್ಗೋದೇವಸ್ಯಧೀಮಹಿ
ದಿಯೋ ಯೋನ ಪ್ರಚೋದಯಾತ್

ಸ್ಥೂಲವಾದ ಅರ್ಥ-- ಯಾವ ಪರಮಾತ್ಮನು ನಮ್ಮ ಬುದ್ಧಿ ವೃತ್ತಿಗಳನ್ನು ಪ್ರೇರೇಪಿಸುತ್ತಿರುವನೋ, ಅಂತಹ ಪ್ರಕಾಶಮಾನವಾದ, ಸರ್ವಾಂತರ್ಯಾಮಿಯಾದ, ಸರ್ವಪ್ರೇರಕನಾದ ಪರಮೇಶ್ವರನ ಶ್ರೇಷ್ಠವಾದ ಸ್ವಯಂಪ್ರಕಾಶವಾದ ತೇಜಸ್ಸನ್ನು ಧ್ಯಾನಮಾಡುತ್ತೇನೆ

ಮುಖ್ಯವಾಗಿ ಮಾನವನು ತಾನು ಎಲ್ಲಿಂದ ಬಂದಿರುವನೋ ಅಲ್ಲಿಗೇ ಹೋಗಿ ಸೇರುವಂತೆ ಪ್ರೇರೇಪಿಸುವುದೇ ಶ್ರೀ ಗಾಯತ್ರೀ ಮಂತ್ರ. "ಗಾಯಂತಂ ತ್ರಾಯತೇ ಇತಿ ಗಾಯತ್ರೀ" --ಇದು ಅನ್ವರ್ಥನಾಮ ಸಂಧ್ಯಾಮತ್ತು ಗಾಯತ್ರೀ ಮಹಿಮೆಯನ್ನು ಕುರಿತು ಋಷಿವಾಣಿ ಈ ರೀತಿ ಇದೆ

ಶ್ರೀ ಗಾಯತ್ರೀ ಜಗನ್ಮಾತಾ,
ಪರಬ್ರಹ್ಮಸ್ವರೂಪಿಣೀ
ಸಪ್ತಕೋಟಿ ಮಹಾ ಮಂತ್ರ
ಸರ್ವಶಾಸ್ತ್ರಾರ್ಥಗೋಚರೀ
ಸರ್ವೇಷಾಂ ಜಪಸೂಕ್ತಾನಾಮ್
ಗಾಯತ್ರೀ ಪರಮೋಜಪ
ದುರ್ಲಭಾ ಸರ್ವಮಂತ್ರೇಷು
ಗಾಯತ್ರೀ ಪ್ರಣವಸ್ಥಿತಾ
(ಬೃಹತ್ಪಾರಾಶರ ಸಂಧ್ಯಾಭಾಷ್ಯ)

ಗಾಯತ್ರ್ಯಾ ನ ಪರಂ ಜಪ್ಯಂ,
ಗಾಯತ್ರ್ಯಾ ನ ಪರಂ ತಪ
ಗಾಯತ್ರ್ಯಾ ನ ಪರಂ ಧ್ಯಾನಂ
ಗಾಯತ್ರ್ಯಾ ನ ಪರಂ ಹುತಂ
ಶ್ರೀಗಾಯತ್ರೀ ಜಗನ್ಮಾತಾ,
ಪರಬ್ರಹ್ಮಸ್ವರೂಪಿಣೀ
ಪರಮಾರ್ಥಪ್ರದಾ ಜಪ್ಯೆ
ಬ್ರಹ್ಮತೇ ಜೋವಿವರ್ದಿನೀ

ಗಾಯತ್ರಿ ಮಹಿಮೆಯನ್ನು ಕುರಿತು ಇನ್ನು ಅಸಂಖ್ಯ ಹೇಳಿಕೆಗಳಿವೆ ಆದುದರಿಂದ ಉಪನಯನ ಸಂಸ್ಕಾರವನ್ನು ಮಾಡಿಸಿಕೊಂಡು ತಿಳಿಯದೇ ಶ್ರೀ ಗಾಯತ್ರಿ ಜಪವನ್ನು ಬಿಟ್ಟವರು -- ಈಗಲೂ ಪಶ್ಚಾತ್ತಾಪ ಹೊಂದಿದವರಾಗಿ ಉಚಿತ ಪ್ರಾಯಶ್ಚಿತ್ತ ಮಾಡಿಗೊಂಡು ಮುಂದೆಯಾದರೂ ಗಾಯತ್ರಿಯ ಜಪ ಮಾಡುವುದು ಉತ್ತಮ

ಇದರಿಂದ ತಾವೂ ಸುಖವನ್ನು ಹೊಂದಿ ತಮ್ಮ ಪೀಳಿಗೆಯವರಿಗೂ ಮಾರ್ಗದರ್ಶನ ನೀಡಿದರೆ ನಿಶ್ಚಯವಾಗಿಯೂ ನಾವು ಮಹಾಋಷಿಗಳ ವಂಶದವರೆಂದು ಹೇಳಿಕೊಳ್ಳುವ ಯೋಗ್ಯತೆದೊರೆಯುತ್ತದೆ ಶ್ರೀ ಗಾಯತ್ರಿಯನ್ನು ಜಪಮಾಡುವ ವಿದಾನವನ್ನು ಈ ರೀತಿ ವಿವರಿಸಿದ್ದಾರೆ

ಸಹಸ್ರಪರಮಾಂ ದೇವೀಂ,
ಶತಮಧ್ಯಾಂ ದಶಾವರಾಂ
ಗಾಯತ್ರೀಂ ಯೋಜಪೇತ್ ವಿಪ್ರ,
ನ ಪಾಪೇನ ಲಿಪ್ಯತೇ
ದಶಭಿ ಜನ್ಮಜನಿತಂ,
ಶತೇನಚ ಪುರಾಕೃತಂ,
ಸಹಸ್ರೇಣ ತ್ರಿಜನ್ಮೋತ್ಥಂ,
ಗಾಯತ್ರೀ ಹಂತಿ ದುಷ್ಕೃತಂ

ಹಸಿರಿದ್ದರೆ ಉಸಿರು

ಹಸಿರಿದ್ದರೆ ಉಣಿಸು

ಹಸಿರಿದ್ದರೆ ನೀರು

## ವೃಕ್ಷೋ ರಕ್ಷತಿ ರಕ್ಷಿತಃ

*ಗಿಡಗಳನ್ನು ಕಾಪಾಡಿರಿ*

**ಮಾನವ ಪರಿಸರವನ್ನು**

**ಕಾಪಾಡಿದಂತಾಗುತ್ತದೆ**

ಶ್ರೀ ಗಾಯತ್ರಿ ಜಪವನ್ನು ಎಂದಿಗೂ ತ್ಯಜಿಸಬಾರದು ಕಷ್ಟಕಾಲದಲ್ಲಿ ಸಹ ದಶ ಗಾಯತ್ರೀ ಜಪವನ್ನಾದರೂ ಮಾಡಬೇಕು ಕರ್ಮ, ಭಕ್ತಿ, ಜ್ಞಾನ ವೈರಾಗ್ಯಗಳ ಸಾರವು ಸಂಧ್ಯಾಕರ್ಮದಲ್ಲಿದೆ

ಸದಾಚಾರವು ನಿರ್ಬಂಧದಿಂದಲೇ ನಡೆಯಬೇಕು ಶಾಸ್ತ್ರ, ಗುರು, ರಾಜಾಜ್ಞೆ, ಆಯಾಪಂಗಡಗಳಲ್ಲಿರುವವರಿಗೆ ನಿರ್ಬಂಧ ಚಿಕ್ಕವರಿಗೆ ಮಾತಾಪಿತೃಗಳಿಂದ ನಿರ್ಬಂದ ಇವು ಉತ್ತಮ ಫಲಕಾರಿ

## *ದರ್ಮೋರಕ್ಷತಿ ರಕ್ಷಿತಃ*

ಪ್ರಾಣೋತ್ಕ್ರಮಣಕಾಲದಲ್ಲಿ ಸದಾಚಾರಗಳಿಂದ ಗಳಿಸಿದ "ದರ್ಮವೊಂದೇ" ಮಾನವನ ರಕ್ಷಾಕವಚ ಧರ್ಮವನ್ನು ನಾವು ರಕ್ಷಿಸಿದರೆ ನಮ್ಮನ್ನು ಧರ್ಮವು ರಕ್ಷಿಸುತ್ತದೆ ಆದ್ದರಿಂದ ಉಳಿದ ಶಾಸ್ತ್ರೋಕ್ತ ಕರ್ಮಗಳನ್ನು ಮಾಡಲು ಆಗದವರು ನಿತ್ಯಕರ್ಮವಾದ ಸಂಧ್ಯಾಕರ್ಮವನ್ನಾದರೂ ಮಾಡಲೇಬೇಕು ಇದು ವಿಧಿ ಸಂದ್ಯಾವಂದನೆಯ ತತ್ವಾರ್ಥವನ್ನು ಮನನಮಾಡಿಕೊಂಡು ಕರ್ಮಾನುಷ್ಠಾನ ಗೈದರೆ, ಅನಂತ ಫಲ ದೊರೆಯುವುದು ಇದು ಸಕಲ ಹಿತಕ್ಕೂ ಸಾಧನವು

|| ಓಂ ಶಾಂತಿ ಶಾಂತಿ ಶಾಂತಿ ||



ಸಂದರ್ಶಿಸಿ ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ, ಹಿರಿಮೆ, ಪರಂಪರೆ, ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ

ತಿರುಮಲೆಯ ಸಾವಿರ ಕಂಬದ ಸಂಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು, ಮಾನವ ಶಾಸ್ತ್ರ, ಪ್ರಾಕ್ ವಸ್ತುಗಳನ್ನೂ ನೆಲ, ಸಸ್ಯಗಳ ಬಗೆಗಳನ್ನೂ, ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ ಇಲ್ಲಿ ಅಪರೂಪದ ಮರದ ಕೆತ್ತನೆಗಳೂ, ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿದ ಪ್ರಾಚೀನ ವಾದ್ಯ ವಿಶೇಷಗಳೂ, ತಿ ತಿ ದೇ ಮತ್ತಿತರ ಕಡೆಗಳಲ್ಲಿ ದೊರೆತ ಆಯುಧಗಳೂ ಪ್ರದರ್ಶಿತವಾಗಿವೆ ಬೇರೆ ಬೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್ ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ, ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ ಇದರ ಹಲವು ವಿಭಾಗಗಳೆಂದರೆ---

ವಾಸ್ತುಶಾಸ್ತ್ರ ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ, ಭೂಶುದ್ಧಿ, ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದ್ದು, ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ

ಶಿಲ್ಪಶಾಸ್ತ್ರ ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ

ವಿಗ್ರಹಗಳು ವಿಷ್ಣುವಿನ ಹಲವಾರು ರೂಪಗಳ, ಭಂಗಿಗಳೂ, ಆಭರಣಗಳೂ ವ್ಯಾವೃತವಾಗಿವೆ

ಆಳ್ವಾರ್‌ಗಳು ವಿಶಿಷ್ಟಾದ್ವೈತ ತತ್ವದ ಪ್ರಪತ್ತಿ ಮಾರ್ಗಕ್ಕೆ ಆಳ್ವರರ ಸಂದೇಶಗಳೇ ಆಧಾರ ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು

ಸಮಯಾಚಾರಗಳು ಸನಾತನದ ಧರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ, ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ ೧೦೮ ದಿವ್ಯಕ್ಷೇತ್ರಗಳೂ ೧೦೮ ತಿರುಪತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ

ಕಲೆ ಹರಿದಾಸರ ಹಿರಿಮೆಯನ್ನೂ, ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ ವಿಷ್ಣು, ಶಕ್ತಿ, ಷಣ್ಮುಖ, ಮೊದಲಾದ ೮ನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ ೯ನೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ

ಪರಂಪರೆಯ ಪರಿಚಯ ಹೊಂದಿರಿ --- ಒಮ್ಮೆ ಭೇಟಿ ನೀಡಿರಿ

---

ಕಾಲ . ಬೆಳಗ್ಗೆ ೮ ರಿಂದ

ರಾತ್ರಿ ೮ ರ ವರೆಗೆ

ಟಿಕೆಟ್ ರೂ ೧--೦೦ (ಹಿರಿಯರಿಗೆ)

" " ೦--೫೦ (ಕಿರಿಯರಿಗೆ)

# ದಕ್ಷಿಣ ಕನ್ನಡದ ವಿನಾಯಕ ಕ್ಷೇತ್ರಗಳು

--ಹೊನ್ನಾವರ ಆರ್ ಜಿ ಶ್ಯಾನಭಾಗ

ಕರ್ಮಭೂಮಿ ಮತ್ತು ಪುಣ್ಯಬೂಮಿ ಎಂದೆನಿಸಿರುವ ಭರತ ಖಂಡದ ಪರಶುರಾಮ ಸೃಷ್ಟಿಯ ಒಡಲಲ್ಲಿ ಹಲವಾರು ಶ್ರೀ ವಿನಾಯಕ ಕ್ಷೆತ್ರಗಳು ಹದಿಮೂಡಿ ಬಂದಿವೆ ದಕ್ಷಿಣೋತ್ತರ ಜಿಲ್ಲೆಗಳ ಹಟ್ಟಿ ಅಂಗಡಿ, ಆನೆಗುಡ್ಡ, ಇಡಗುಂಜಿ ಮತ್ತು ಗೋಕರ್ಣ ಶ್ರೀಕ್ಷೇತ್ರಗಳ ಸಿದ್ಧಿವಿನಾಯಕರುಗಳು ಉಲ್ಲೇಖನೀಯ ಭಕ್ತ ಭಜಕರ ಅಭೀಷ್ಟಗಳನ್ನು ಕ್ಷಣದಲ್ಲಿಯೇ ಫಲಿಸುವಂತೆ ಮಾಡುವ ಈ ವಿಘ್ನೇಶ್ವರರುಗಳಿಂದಾಗಿ ಈ ಶ್ರೀಕ್ಷೇತ್ರಗಳೆಲ್ಲವೂ ಕಾರಣಿಕ ಸ್ಥಾನಗಳಾಗಿ ಪರಿಣಮಿಸಿವೆ ಎಂದೇ ಬಕ್ತಬಾವುಕರು ಪ್ರವಾಹೋಪಾದಿಯಲ್ಲಿ ದರ್ಶನ ಪಡೆಯಲು ಬರುತ್ತಿರುತ್ತಾರೆ

## ಹಟ್ಟಿಅಂಗಡಿ ವಿನಾಯಕ

ದಕ್ಷಿಣ ಕನ್ನಡದ ನಿಸರ್ಗದ ಸಿರಿ ಸೆರಗಿನಲ್ಲಿ ಆಸರೆ ಪಡೆದು ನಿಂತ ಹಟ್ಟಿಅಂಗಡಿ ಕುಂದಾಪುರದಿಂದ ಬೈಂದೂರಿಗೆ ಸಾಗುವ ಶ್ರೀಕ್ಷೇತ್ರ ಕೊಲ್ಲೂರು ರಸ್ತೆಯಿಂದ ಸನಿಹದಲ್ಲಿರುವ ಇನ್ನೊಂದು ಶ್ರೀ ಸಿದ್ಧಿ ವಿನಾಯಕ ಶ್ರೀಕ್ಷೇತ್ರ ವರಾಹಿ ನದಿಯ ತಟದ ಮೇಲೆ ತಳವೂರಿದ ಈ ಕ್ಷೇತ್ರ ಆದಿಯಲ್ಲಿ ಗೋಷ್ಠಿಪುರವೆಂದು ನಾಮವಾಸಿಯಾಗಿತ್ತು ವಿಚಾರ ಚಿಂತನ ಮಂದನಕ್ಕಾಗಿ, ತತ್ವವೇತ್ತರು, ದಾರ್ಶನಿಕರು ಮತ್ತು ವಿದ್ವಾಂಸರುಗಳು ಈ ಸ್ಥಳದಲ್ಲಿ ವಿಚಾರಗೋಷ್ಠಿಗಳನ್ನು ನಡೆಸುತ್ತಿರುವುದರಿಂದಲೇ ಹಟ್ಟಿಯಂಗಡಿ ಗೋಷ್ಠಿಪುರವೆಂದು ಮೆರೆದಾಡಿತು ವಿದ್ವತ್ ಪರಂಪರೆಯ ಛಾಯೆ ಇರುವ ಈ ತಾಣದಲ್ಲಿ ವಿದ್ಯಾದಿ ದೇವತೆಯಾದ ಶ್ರೀ ಗಣೇಶನು ತಳವೂರಿರುವುದು ಸ್ತುತ್ಯರ್ಹ ಹಹಾಗೂ ಅರ್ದಪೂರಿತ ಹಟ್ಟಿಅಂಗಡಿಯ ಸಿದ್ಧಿವಿನಾಯಕ ತನ್ನ ಅಪಾರ ಮಹಿಮಾಪರಂಪರೆಯಿಂದ ಭಕ್ತರ ಮನೋಬಯಕೆಗಳನ್ನು ಈಡೇರಿಸಿ ಕಾಮದೇನುವಾಗಿರುವುದರಿಂದಲೇ ಹಟ್ಟಿಅಂಗಡಿ ಶ್ರೀಕ್ಷೇತ್ರ ಭಕ್ತರಪಾಲಿಗೆ ಆಯಸ್ಕಾಂತಸ್ವರೂಪ ತಾಳಿರುವ ತಾಣವಾಗಿದೆ

## ಮಿಂಚಿದ ಸುವರ್ಣರೇಖೆ

ಒನೇ ಶತಮಾನದಲ್ಲಿ ಈ ಸಿದ್ಧಿವಿನಾಯಕ ಪುತ್ಥಳಿ ಪ್ರತಿಷ್ಠೆಗೊಂಡಿರುವುದು ದೇವಾಲಯದ ಗೋಪುರ ಶೈಲಿಯ ಶಿಲಾಕೃತಿಯಿಂದ ತಿಳಿದು ಬರುತ್ತದೆ ಅಂದಿನಿಂದ ಇಂದಿನವರೆಗೆ ಶ್ರೀ ದೇವರು ಭಕ್ತರ ಬೆಂಗಾವಲಿಗನಾಗಿ ನಿಂತು ಅವರ ಅಭೀಷ್ಟಗಳನ್ನು ಈಡೇರಿಸುತ್ತಿರುವನು ಸಾಲಿಗ್ರಾಮ ಶಿಲೆಯಲ್ಲಿ ಪಡಿಮೂಡಿಸಿರುವ ಈ ಮೂರ್ತಿ ಎರಡುವರೆ ಅಡಿ ಎತ್ತರದ್ದಾಗಿದೆ ಶಿಖೆಯಲ್ಲಿ ಜಟೆ ಇರುವುದೇ ಈ ಮೂರ್ತಿಯ ಶಿಲ್ಪ ವೈಶಿಷ್ಟವಾಗಿರುವುದು ವಿಗ್ರಹದ ಹಿಂಭಾಗದಲ್ಲಿ ತಲೆಯಲ್ಲಿರುವ ಗುಂಗುರ ಕೂದಲಾಕೃತಿಯ ಗಂಟಿನ ಕೆತ್ತನೆ ಬೆನ್ನಿನವರೆಗೆ ಇಳಿದ ಶೈಲಿಯಲ್ಲಿದೆ ಇದೊಂದು ಬಾಲಗಣೇಶನ ವಿಗ್ರಹವೆಂದು ಖ್ಯಾತ ಇತಿಹಾಸ ಸಂಶೋದಕ ಡಾ|| ಗುರುರಾಜ ಭಟ್ಟರ ಅಭಿಪ್ರಾಯ ಸಿದ್ಧಿ ವಿನಾಯಕನು ದ್ವಿಭುಜವುಳ್ಳವನು ಸೊಂಡಿಲು ಎಡಗಡೆಗೆ ಬಾಗಿದೆ ಹಾಗೂ ಮೋದಕ ತಿನ್ನುವ ಶೈಲಿಯಲ್ಲಿದ್ದಂತಿರುವುದು ಅದಕ್ಕೆ ಪೂರಕವಾಗಿ ಎಡಗೈಯಲ್ಲಿ ಮೋದಕಪಾತ್ರೆ ಇದೆ ಬಲಗೈ ಪಾಶವಿರದಿಂದ ಬಾದು ಮೋಗಿದ ವಿಗ್ರಹ ಹೊಟ್ಟೆಯವರಗೆ ಸಿದ್ಧಿವಿನಾಯಕನಂತೆ ಹೋಲುವುದು ಗೋಕರ್ಣ ಮತ್ತು ಇಡಗುಂಜಿಯ ಸಿದ್ಧಿವಿನಾಯಕನ ವಿಗ್ರಹದ ಶೈಲಿಗೆ ಇದು ಹೋಲುವಂದದ್ದು ವಿಗ್ರಹ ನಿಂತ ಶೈಲಿಯಲ್ಲಿದೆ ಎಂದು ಊಹಿಸಬಹುದು ಬಲಗೈಯಲ್ಲಿ ಪಂಕಿಯ ಆಭರಣವಿದೆ ಅಂದವಾದ ಮೂರ್ತಿ, ಚಂದವಾದ ಚಟ್ಟಾಕ ಪಾಣಿಪೀಠದ ಮೇಲೆ ನಿಂತಂತೆ ಬಾಸವಾಗುವುದು ಪಾಣಿಪೀಠ ಮತ್ತು ವಿಗ್ರಹ ಒಂದಾಗಿಸಿದ ಅಷ್ಟಬಂಧ ಹೂವಿನಾಕಾರದಲ್ಲಿ ಸುತ್ತ ಕಾಣುತ್ತದೆ. ಇತ್ತೀಚೆಗೆ ಬಲಭಾಗದಿಂದ ಎಡಬಾಗದ ಕಡಗ ಸುವರ್ಣರೇಖೆ ಮೂಡಿ ಬಂದಿದೆ ವಿನಾಯಕನ ಎರಡೂ



## ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ

### ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5 00 | ಪ್ರಾ 5 30 |
| ವಿಶ್ವರೂಪ ಸರ್ವದರ್ಶನ | ಪ್ರಾ 5- 30 | ಪ್ರಾ 7 00 |
| ತೋಮಾಲ ಸೇವೆ (ಆರ್ಜಿತ) | ಪ್ರಾ 7 30 | ಪ್ರಾ 8- 00 |
| ಅರ್ಚನೆ (ಆರ್ಜಿತ) | ಪ್ರಾ 8--00 | ಪ್ರಾ 8- 00 |
| ಸರ್ವದರ್ಶನ | ಪ್ರಾ 9 00 | ಪ್ರಾ 12 30 |
| | ಮ 1 00 | ಸಂ 6- 00 |
| | ರಾ 7 00 | ಪ್ರಾ 8 45 |
| ಏಕಾಂತಸೇವೆ | | ರಾ 9 00ಕ್ಕೆ |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರಹಬ್ಬಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವುಪ್ರಾ. 5--30 ರಿಂದ ಪ್ರಾ. 6- 30 ರ ವರೆಗೆ ಮಾತ್ರ.

### ಆರ್ಜಿತ ಸೇವೆಗಳು

| | |
|---|---|
| 1 ಗರುಡವಾಹನ | 32 00 |
| 2. ಚಂದ್ರಪ್ರಭ ವಾಹನ | 32 00 |
| 3 ಗಜವಾಹನ | 32 00 |
| 4 ಅಶ್ವವಾಹನ | 32 00 |
| 5 ಸಿಂಹವಾಹನ | 32 00 |
| 6. ಹಂಸವಾಹನ | 32 00 |
| 7 ಚಿಕ್ಕಶೇಷವಾಹನ | 32 00 |
| 8. ದೊಡ್ಡ ಶೇಷವಾಹನ | 62 00 |
| 9 ಸೂರ್ಯಪ್ರಭವಾಹನ | 62 00 |

### ಪಡಿಪ್ರಸಾದಗಳು

| | |
|---|---|
| 1 ದೋಸೆ ಕಾಲಸೋಲ | 35- 00 |
| 2. ದಧ್ಯೋದನ " | 40 00 |
| 3 ಪುಳಿಯೋಗರೆ " | 50- 00 |
| 4 ಪೊಂಗಲು " | 55 00 |
| 5 ಸಕ್ಕರಪೊಂಗಲ್ " | 65 00 |
| 6 ಶಾಕರ ಭಾತ್ " | 85- 00 |
| 7 ಕೇಸರಿಭಾತ್ " | 90- 00 |
| 8 ಸೀರ " | 155--00 |

ವಿವರಗಳಿಗೆ
**ಪೇಷ್ಕಾರ್,**
ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿ ತಿ ದೇ

ಕಿವಿಗಳು ಆನೆ ಕಿವಿಗಳ ಮಾದರಿಯಲ್ಲಿ ಅಗಲವಾಗಿವೆ ಕಿರಿದಾದ ಕಣ್ಣುಗಳು ಮೈಮನಗಳಿಗೆ ಮುದ ವೀಯುತ್ತವೆ

ಶ್ರೀದೇವರ ಪೂಜಾನೈವೇದ್ಯಗಳಲ್ಲಿ ಮಲೀನತೆ ಯಾದರೆ ವಿಗ್ರಹದ ಎಡಗಡೆಯಿಂದ ಹರಿಯುವ ಮದಜಲ ಸೊಂಡಿಲ ಮೂಲಕ ಸ್ರವಿಸುತ್ತಿತ್ತು ಸಂಪ್ರೋಕ್ಷಣೆಯಾದೊಡನೆ ತೋರಿಕೆ ನಿಲ್ಲುತ್ತಿತ್ತೆಂದು ಈ ಘಟನೆ ಕಣ್ಣಾರೆ ಕಂಡಿರುವ ವಯೋವೃದ್ಧೆಯೋರ್ವಳು ಹೇಳಿದ ಮಾತುಗಳು ಸಿದ್ಧಿ ವಿನಾಯಕನಿಗೆ ಪಂಚಲೋಹದ ಪ್ರಭಾವಳಿ ಇದೆ ಬೆಳ್ಳಿ ಕವಚ ಇದೆ ವಿಗ್ರಹದ ಬೆಳವಣಿಗೆಯಿಂದಾಗಿ ವಿಗ್ರಹಕ್ಕೆ ಹಿಡಿಸಲು ಕವಚ ಕಿರಿದಾಗುತ್ತಿದೆ ಕಿರಿದಾಗಿರುವ ವಿಗ್ರಹ ಹಿರಿದಾಗುತ್ತಿದ್ದಂತೆ ಶ್ರೀದೇವರ ಮಹಿಮೆಯೂ ಹಿರಿದುಗೊಳ್ಳುತ್ತಿದೆ ಬಂಗಾರದ ರುದ್ರಾಕ್ಷಿ ಸರ ದೇವರಿಗೆ ಇರುವ ಕಂಠಾಭರಣ ಉಡಿಗೆ ತೊಡಿಗೆಯಿಂದ ವಿಗ್ರಹ ಸರ್ವಾಲಂಕೃತಗೊಂಡಾಗ ಮೋಹಕವಾಗಿ ಗೋಚರಿಸುತ್ತದೆ

ಗರ್ಭಗುಡಿಯ ದ್ವಾರದಲ್ಲಿ ನಾಲ್ಕೂಕಡೆ ಪಂಚ ಲೋಹದ ದಶಾವತಾರ ಕೆತ್ತನೆಗಳಿವೆ ಮೇಲುಭಾಗದಲ್ಲಿ ಸರಸ್ವತಿ ಎಡಭಾಗದಲ್ಲಿ ಶ್ರೀದೇವಿ -- ಲಕ್ಷ್ಮೀದೇವಿಯ ಕೆತ್ತನೆಗಳಿವೆ ದೇವಾಲಯಕ್ಕೆ ಆದುನಿಕ ಶಿಲ್ಪ ಶೈಲಿಯ ಬಲವಿದೆ ದಿನದ ಎರಡೂ ಹೊತ್ತು ಸಿದ್ಧಿ ವಿನಾಯಕನಿಗೆ ಪೂಜಾಕೈಂಕರ್ಯಗಳು ನಡೆಯುವುವಲ್ಲದೆ ಆಗಮಿಸಿರುವ ಭಕ್ತ ಬಜಕರಿಂದ ವಿಶೇಷ ಸೇವಾಪೂಜೆಗಳು ನಡೆಯುವುವು. ಗಣಹೋಮ, ಗಣಯಾಗಗಳು ಶ್ರೀ ಸಿದ್ಧಿವಿನಾಯಕನ ಅಡಿದಾವರೆಗಳಲ್ಲಿ ಸಲ್ಲಿಸಬಹುದಾದ ಅನುಪಮ ಸೇವೆಗಳಾಗಿವೆ ಭಜಕರಿಗೆ ಪ್ರಸಾದ ವಿನಿಯೋಗಗಳು ನಡೆಯುವುವು. ಭಜಕರು ಅನುಗ್ರಹ ಪಡೆಯಲೋಸುಗ ಮಹಾಪ್ರಸಾದ ಕೇಳಲು ಬರುತ್ತಾರೆ ನಿರ್ಮಲ ಮನಸ್ಸಿನಿಂದ ಅರ್ಚನೆಮಾಡಿ ಅರ್ಚಕರು ಮಂಗಳಾಷ್ಟಕ ಹೇಳಿ ಆರತಿ ಎತ್ತಿರುವ ಕೆಲ ನಿಮಿಷಗಳಲ್ಲಿಯೇ ಶ್ರೀ ಸಿದ್ಧಿ ವಿನಾಯಕನ ಶಿಖೆಯಿಂದ ಪ್ರಸಾದ ಬಲಭಾಗಕ್ಕೆ ಆಗುತ್ತದೆ ಈ ಮಹಾಪ್ರಸಾದ ವರಪ್ರಸಾದವೇ ಆಗಿರುವುದು

## ಕಾರಣಿಕಸ್ಥಾನ

ಶ್ರೀದೇವರಿಗೆ ಪೂಜಾಕೈಂಕರ್ಯಗಳನ್ನು ಸಲ್ಲಿಸುತ್ತ ಬಂದಿರುವ ಪುರೋಹಿತ ಕುಟುಂಬ ಆಧ್ಯಾತ್ಮಿಕ ಹಾಗೂ ಪಾಂಡಿತ್ಯ ಪರಂಪರೆಯನ್ನು ಮೈಗೂಡಿಸಿಕೊಂಡಿರುವ ಹೆಗ್ಗಳಿಕೆಯನ್ನು ಹೊಂದಿದೆ ತಪೋಧನರಾದ ಗೋವಿಂದ ರಾಮ ಯತಿಯವರಿಂದ ಈ ಅರ್ಚಕತನ ನಡೆಯ ಬಂದಿದೆ ಸಿದ್ಧಿ ವಿನಾಯಕನ ಕೃಪಾಕಟಾಕ್ಷದಿಂದಾಗಿ ವಿದ್ವಾಂಸರಾದ ಈ ಅರ್ಚಕರು ಯಕ್ಷಗಾನ ಕವಿಗಳಾಗಿ ಹಲವಾರು ಕೃತಿಗಳನ್ನು ರಚಿಸಿದ್ದಾರೆ ಅತಿಕಾಯ ಕಾಳಗ, ಸುಭದ್ರಾ ಪರಿಣಯ, ಲವಕುಶರ ಕಾಳಗ ಮೊದಲಾದ ಯಕ್ಷಗಾನ ಕೃತಿಗಳನ್ನು ರಚಿಸಿ ರಂಗಸಜ್ಜಿಕೆಯ ಮೇಲೆ ಬೆಳಕನ್ನು ಕಾಣಿಸಿದ್ದಾರೆ ವಿದ್ವತ್‌ಪೂರ್ಣ ಪರಂಪರೆಯನ್ನು ಹೊಂದಿರುವುದು ಇಲ್ಲಿಯ ಅರ್ಚಕ ಮನೆತನದ ವೈಶಿಷ್ಟ್ಯ

ಪ್ರತಿ ಪಾಲ್ಗುಣ ಶುದ್ಧ ಹುಣ್ಣಿಮೆಯಂದು ಶ್ರೀದೇವರಿಗೆ ವಿಶೇಷ ಪೂಜಾ ಉತ್ಸವಗಳು ನಡೆಯುತ್ತವೆ ಸಹಸ್ರಾರು ಭಕ್ತವೃಂದಾದಿಗಳ ಸಮ್ಮುಖದಲ್ಲಿ ಆಗ ದಾರ್ಮಿಕ ಉಪಾಸನೆಗಳು ಹೋಮ ಹವನಗಳು, ಹರಿಕದಾಕಾಲಕ್ಷೇಪಗಳು ಮತ್ತಿತರ ಸಾಂಸ್ಕೃತ ಕಾರ್ಯಕ್ರಮಗಳು ನಡೆಯುತ್ತವೆ

ಶ್ರೀಕ್ಷೇತ್ರದಲ್ಲಿ ವಿವಾಹ, ಉಪನಯನ ಮೊದಲಾದ ಮಂಗಳಕಾರ್ಯ ನಡೆಸಲು ಉತ್ತಮ ಏರ್ಪಾಡು ವ್ಯವಸ್ಥೆಗಳಿವೆ ತಂಗಲು ವಸತಿಗೃಹವಿದೆ ಆತಿಥ್ಯ ನೀಡಲು ದೇವಾಲಯದ ಅರ್ಚಕರು ಸದಾ ಸಿದ್ಧಹಸ್ತರು

ನೆಂಟಸ್ತಿಕೆ, ವರಾನ್ವೇಷಣೆ ಸಂತಾನಪ್ರಾಪ್ತಿ, ಗೃಹ ನಿವೇಶನ ಆಯ್ಕೆ, ಉದ್ಯೋಗಾನ್ವೇಷಣೆಗಳಂಥ ಸಮಸ್ಯೆಗಳಿಗೆ ಸಿದ್ಧಿ ವಿನಾಯಕನು ನೀಡಿರುವ ಪ್ರಸಾದ ವರಪ್ರಸಾದವೇ ಆಗಿರುವುದು ಮನಸ್ಸನ್ನು ತಿಳಿಮಾಡುವ ಜೀವನವನ್ನು ಪಾವಿತ್ರ್ಯಕ್ಕೆ ಒಯ್ಯುವ ಸರ್ವ ಸಂಕಷ್ಟಗಳನ್ನು ಹರಣಮಾಡುವ ಘನಕೆಲಸ ನಡೆಸಿಕೊಡುವ ಹಟ್ಟಿಅಂಗಡಿ ಸಿದ್ಧಿ ವಿನಾಯಕನ ದರ್ಶನಮಾಡಿ ತಮ್ಮಿಷ್ಟಗಳಿಗೆ ಮಹಾಪ್ರಸಾದವನ್ನು ಪಡೆಯಲು ಇತ್ತೀಚಿನ ದಿನಗಳಲ್ಲಿ ದೇವಸನ್ನಿದಿಯಲ್ಲಿ ಯಾತ್ರಾರ್ದಿಗಳು ಯಧಾಪೂರವಾಗಿ ಬರುತ್ತಿರುವ ದೃಶ್ಯ ವರ್ಣನಾತೀತ

## ಕುಂಬಾಸಿಯ ಗಣಪ

ಉಡುಪಿಯಿಂದ ಉತ್ತರಕ್ಕೆ ಕುಂದಾಪುರಕ್ಕೆ ಹೋಗುವ ರಾಜ್ಯಹೆದ್ದಾರಿಯ ಸಮೀಪ ಸುಮಾರು ೨೦ ಮೈಲು ದೂರ ಶ್ರೀಕ್ಷೇತ್ರ ಕುಂಭಾಸಿ ನೆಲೆಸಿದೆ ಇಲ್ಲಿನ ಬೆಟ್ಟದ ಮೇಲೆ ಶ್ರೀ ವಿನಾಯಕ ಸ್ವಯಂ ವ್ಯಕ್ತನಾಗಿ ಭಕ್ತಾಭೀಷ್ಟದಾಯಕನಾಗಿ, ಭಕ್ತರ ನಿಧಿಯಾಗಿ ವಿರಾಜಿಸುತ್ತಿದ್ದಾನೆ ಶ್ರೀ ವಿನಾಯಕನು ನೆಲೆಸಿರುವ ಬೆಟ್ಟದ ತಾಣಕ್ಕೆ ಆನೆಗುಡ್ಡೆ ಎನ್ನುವರು ಇದರ ಸುತ್ತಮುತ್ತ ಪ್ರಶಾಂತ ಪರಿಸರ ಭಾವುಕರ

ಮನಸ್ಸನ್ನು ಲೌಕಿಕದಿಂದ ಅಲೌಕಿಕದೆಡೆಗೆ ಕೇಂದ್ರೀಕರಿಸುವ ನಿರ್ಮಲತಾಣ ಇದಾಗಿದೆ ಇಲ್ಲಿನ ಪವಿತ್ರ ತೀರ್ಥದಲ್ಲಿ ಮಿಂದು ಶುಚೀರ್ಭೂತರಾಗಿ ಮೆಟ್ಟಿಲುಗಳನ್ನೇರಿ ವಿಘ್ನೇಶ್ವರನ ದರ್ಶನವನ್ನು ಪಡೆದಾಗ ಭಾವುಕರಿಗಾಗುವ ಆನಂದ ಅವರ್ಣನೀಯ ಸಂಕ್ರಮಣ, ಚತುರ್ಥಿ, ಮಂಗಳವಾರ ಮುಂತಾದ ಮಂಗಳಕರ ದಿನಗಳಲ್ಲಿ ಆಗಮಿಸುತ್ತಿರುವ ಭಕ್ತಭಜಕರ ವೃಂದವು ಶ್ರೀದೇವರ ದರ್ಶನದಿಂದ ದನ್ಯತೆಯನ್ನು ಹೊಂದುವುದು ಪ್ರತಿವರ್ಷ ಮಾರ್ಗಶೀರ ಶುದ್ಧ ಚತುರ್ಥಿಯಂದು ಮಹಾರಥೋತ್ಸವವು ಅದ್ದೂರಿಯಿಂದ ದರ್ಮದರ್ಶಿಗಳು ನಡೆಸುತ್ತಾರೆ

ಶ್ರೀಕ್ಷೇತ್ರ ಕುಂಭಾಸಿ, ಹರಿಹರ ಕ್ಷೇತ್ರ ನಾಗಾಚಲ, ಮದುಕಾನನ, ಗೌತಮಕ್ಷೇತ್ರ, ಆನೆಗುಡ್ಡೆ ಎಂಬ ಇತ್ಯಾದಿ ಹೆಸರುಗಳಿಂದ ಪುರಾಣದಲ್ಲಿ ಉಲ್ಲೇಖವಾಗಿದೆ ಶ್ರೀಕ್ಷೇತ್ರದ ಸ್ಥಳಪುರಾಣ ಮಹಿಮಾ ಪುರುಷನೆಂದರೆ ಶ್ರೀ ಸಿದ್ಧಿವಿನಾಯಕ ಕೃತಯುಗದಲ್ಲಿ ಪರುಷುರಾಮನು ಈ ಕ್ಷೇತ್ರದಲ್ಲಿ ಎರಡು ದೇಗುಲಗಳನ್ನು ನಿರ್ಮಿಸಿ ಹರಿ--ಹರರ ಎರಡು ಪ್ರತ್ಥಳಿಗಳನ್ನು ಪ್ರತಿಷ್ಠಾಪಿಸಿರುವುದರಿಂದ ಕುಂಭಾಸಿಯು ಆದಿಯಲ್ಲಿ ಹರಿಹರ ಕ್ಷೇತ್ರವೆಂದೂ ಹೆಸರನ್ನು ಪಡೆದಿತ್ತು

ಮಧುವೆಂದರೆ ವಸಂತ ಈ ವಸಂತನು ಮನ್ಮಥನ ಸಹಾಯಕ್ಕೆಹೋಗಿ ಹರನ ಕ್ರೋಧಾಗ್ನಿಯಿಂದ ಕಾಂತಿಯನ್ನು ಕಳೆದುಕೊಂಡನು ತನ್ನ ಮೊದಲಿನ ಸೌಂದರ್ಯವನ್ನು ಮರು ಪಡೆಯಲು ವಸಂತನು






ಇಲ್ಲಿ ಬಂದು ತಪಗೈದನು ಶ್ರೀಹರಿ (ಮಾದವನು) ಪ್ರಸನ್ನಗೊಂಡು ವಸಂತನ ಇಚ್ಚೆಯನ್ನು ಈಡೇರಿಸಿದ್ದರಿಂದ ಕುಂಭಾಸಿ ತ್ರೇತಾಯುಗದಲ್ಲಿ ಮಾದವನಿಂದಾಗಿ ಮದುವನವೆಂಬ ನಾಮವೆತ್ತಿತು

## ಧರೆಗಿಳಿದ ಗಂಗೆ

ದ್ವಾಪರಯುಗದಲ್ಲಿ ಹನ್ನೆರಡು ವರ್ಷಕಾಲ ದುರ್ಭಿಕ್ಷೆಯಿಂದ ಪೀಡಿತರಾದ ಮಾನವರು ಗೌತಮ ಮುನಿಗಳಿದ್ದೆಡೆಗೆ ಬಂದು ಅವನ ಆಶ್ರಮದಲ್ಲಿ ಶ್ರೀರಕ್ಷೆಯನ್ನು ಪಡೆದರು ಆ ಸಮಯ ಪಾರ್ವತಿ ಗಣಪತಿಯನ್ನು ಶಿವನ ಮಸ್ತಕದಿಂದ ಗಂಗೆಯನ್ನು ದರೆಗೆ ಇಳಿಸಲು ಕಾರ್ಯೋನ್ಮುಖನಾಗಲು ಆದೇಶಿಸಿದಳು ಈ ಘನಕಾರ್ಯವನ್ನೆಸಗಲು ಗಣಪತಿಯು ಗೌತಮನ ಆಶ್ರಮಕ್ಕೆ ಬಂದನು

ಈ ಸಮಯದಲ್ಲಿ ಆಶ್ರಮವಾಸಿಗಳು ತಮ್ಮ ತಪೋಬಲದಿಂದ ಗೋವು ಮತ್ತು ಕರುಗಳನ್ನು ನಿರ್ಮಿಸಿ ಮೇಯಲು ಬಿಟ್ಟಿದ್ದರು ಗೌತಮರು ತಳಿದ ಮಂತ್ರಜಲದಿಂದ ಮೇಯುತ್ತಿರುವ ಹಸುವಿಗೆ ಮರಣವು ಪ್ರಾಪ್ತವಾಗಿತ್ತು ಕೂಡಲೆ ಮುನಿಗಳು ಗಣೇಶನ ನಿರ್ದೇಶನದಂತೆ ಹರನನ್ನು ಗಂಗೆಯನ್ನು ಬಿಟ್ಟುಕೊಡುವಂತೆ ಪ್ರಾರ್ಥಿಸಿಕೊಂಡನು ಶಂಕರನು ಆಜ್ಞಾವರ್ತಿಯಾಗಿ ಗಂಗೆಯ ಒಂದಂಶ ಗೌತಮರೊಡನೆ ಹೊರಟಿತು ಭೂಮಿಯೆಲ್ಲವೂ ಗಂಗೆಯ ಕೃಪೆಯಿಂದ ಸುಭಿಕ್ಷಗೊಂಡಿತು ಮುನಿಗಳ ಅಪೇಕ್ಷೆಯಂತೆ ಗಂಗೆಯು ದನಕರುಗಳಿಗೆ ಜೀವ ದಾನವನ್ನು ನೀಡಿದಳು ಆದರೆ ವಿಘ್ನೇಶ್ವರನ ಕೈವಾಡದಿಂದ ಗೌತಮನ ಆಶ್ರಮಯಾತ್ರೆ ಉಳಿಯಿತು ಕ್ರೋದಗೊಂಡ ಮುನಿ ಬ್ರಾಹ್ಮಣರ ತಪೋಬಲಗಳನ್ನು ನಾಶಪಡಿಸಿ ಅವರಿಗೆಲ್ಲರಿಗೂ ತನ್ನಂತೆ ಕಷ್ಟಗಳು ಎದಗಿ ಎರಲೆಂದು ಶಾಪವನ್ನಿತ್ತನು

## ಸ್ವಯಂವ್ಯಕ್ತರೂಪಿ

ಮುನಿಗಳೆಲ್ಲರೂ ಶಾಪದಿಂದ ವಿಮೋಚನೆಯನ್ನು ಪಡಯಲು ದೇವಾವನಕ್ಕೆ ಒಂದು ತಪವನ್ನಾಚರಿಸಲು ಆರಂಭಿಸಿದರು ತಪಸ್ಸಿಗೆ ಮೆಚ್ಚಿದ ಶಿವನು ಕೋಟಿಲಿಂಗರೂಪಿಯಾಗಿ ಕಾಣಿಸಿಕೊಂಡನು ಅವರೆಲ್ಲರೂ ಪ ದುಪದಕ್ಕೆ ಹೋ ಗಿ ತಪಸ್ಸನ್ನು ಆಚರಿಸಬೇಕೆಂದು ಶಿವನು ಆದೇಶಿಸಿದನು ಅವರೆಲ್ಲರೂ ತಪೋನಿರತರಾದ ತಾಣದಲ್ಲಿ ಮುನಿವರೇಣ್ಯರಾದ ಗೌತಮ ಹಾಗೂ ಅಗಸ್ತ್ಯ ಮುನಿಗಳೂ ಬಂದು ತಪೋನಿರತರಾದರು

ಅಲ್ಲಿ ಶ್ರೀ ವಿಘ್ನೇಶ್ವರನು ಪ್ರತ್ಯಕ್ಷಗೊಂಡು ಹರನ ಜಟೆಯಿಂದ ಗಂಗೆಯನ್ನು ಕೆಳಗಿಳಿಸಿದನು ಪಾಪಪರಿಹಾರಕ್ಕಾಗಿ ಮುನಿಗಳೆಲ್ಲರೂ ಜಲದಲ್ಲಿ ಮಿಯಬೇಕೆಂದು ಮಾರ್ಗದರ್ಶಿಸಿದಾಗ ಶ್ರೀಗಣೇಶನ ಅಪೇಕ್ಷೆಯಂತೆ ಅವರೆಲ್ಲರೂ ಮಿಂದು ಶುಚೀರ್ಭೂತರಾದರು ಆಗ ಹರಿಹರರಿಬ್ಬರು ಪ್ರತ್ಯಕ್ಷಗೊಂಡು ಶ್ರೀ ಹರಿಯ ಸೂಚನೆಯಂತೆ ಹರನು ಗಂಗೆಯನ್ನು ಕೆಳಗಿಳಿಸಿ ಗೌತಮರ ಕಮಂಡಲದಲ್ಲಿ ನೆಲೆಗೊಳಿಸಿದನು

ತನ್ನ ಘನಕಾರ್ಯದಿಂದ ಸಂತುಷ್ಟಗೊಂಡ ಗಣಪ ಮಾತೆ ಪಾರ್ವತಿ ಹಾಗೂ ಗಂಗೆಯರ ಅಪೇ





ಕ್ಷೆಯಂತೆ ಭಕ್ತರ ಮನೋಭೀಪ್ಸಗಳನ್ನು ಈಡೇರಿಸಲು ಅಲ್ಲಿಯೇ ನೆಲೆಗೊಂಡನು ಅದರಿಂದಲೇ ವಿಶ್ವಂಬರ ರೂಪಿಯಾದ ಗಣೇಶನು ಅಲ್ಲಿಯೇ ಸ್ವಯಂವ್ಯಕ್ತನಾಗಿರುವನು

**ಕುಂಭಾಸುರನ ಸಂಹಾರ**

ಕುಂಭಾಸುರನೆಂಬ ರಾಕ್ಷಸನು ಶ್ರೀಹರಿಯ ವರವನ್ನು ಪಡೆದು ಮದೋನ್ಮತ್ತನಾಗಿದ್ದನು ಅವನು ಮನುಕುಲಕ್ಕೆ ಕಂಟಕಪ್ರಾಯನಾಗಿದ್ದನು ಇದರಿಂದ ವನವಾಸಿ ಪಾಂಡವರಿಗೆ ಗೌತಮಾದಿ ಋಷಿಗಳು ಮನುಕುಲವನ್ನು ರಕ್ಷಿಸಲು ಮೊರೆಯಿಟ್ಟರು ಧರ್ಮರಾಯನು ನಾಗಾಚಲಕ್ಕೆ ಬಂದು ಗಣೇಶನನ್ನು ಪೂಜಿಸಿ ಭೀಮಾದಿಗಳನ್ನು ರಾಕ್ಷಸನ ಸಂಹಾರಕ್ಕಾಗಿ ಕಳುಹಿಸಿದನು, ಭೀಮನಿಗೂ ಕುಂಭಾಸುರನಿಗೂ ಘೋರ ಕಾಳಗ ನಡೆಯಿತು ಶ್ರೀ ವಿಘ್ನೇಶ್ವರನನ್ನು ಸ್ತುತಿಸದೇಕೆಂದು ಅಶರೀರವಾಣಿಯಾದುದು ಭೀಮನು ಆಲಿಸಿದನು ಗಣೇಶನನ್ನು ಸ್ಮರಿಸಿದೊಡನೆ ಪ್ರಸಾದ ರೂಪವಾದ ಖಡ್ಗ ಒಂದು ಭೀಮನ ಕೈಗೆ ಬಂದಿತು ಈ ಖಡ್ಗದಿಂದ ಭೀಮ ಕುಂಭಾಸುರನನ್ನು ಸಂಹರಿಸಿದನು ಅದರಿಂದಲೇ ಶ್ರೀ ಗಣೇಶನು ನೆಲೆಸಿದ ತಾಣ ಕುಂಭಾಸಿ ಎಂಬ ಹೆಸರನ್ನು ಪಡೆಯಿತು

# ತಿರುಪತಿಯ ಸ್ಥಳೀಯ ದೇವಾಲಯ ದರ್ಶಿನಿ

ತಿರುಪತಿಗೆ ಒರುವ ಯಾತ್ರಿಕರು ಶ್ರೀವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ ತಿ ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ ಈ ಬಸ್‌ನಲ್ಲಿ ಹೊರಟು,

**ಶ್ರೀ ಗೋವಿಂದರಾಜಸ್ವಾಮಿ ದೇವಾಲಯ**
**ಶ್ರೀ ಕೋದಂಡರಾಮಸ್ವಾಮಿ ದೇವಾಲಯ**
**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು**
**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ**
**ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ**

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು (೨ ಗಂಟೆಗಳಲ್ಲಿ)

| | |
|---|---|
| ಬಸ್ ಹೊರಡುವ ಸ್ಥಳ | ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೇಸ್ಟೇಷನ್ ದಕ್ಷಿಣ) |
| ಬಸ್ ಹೊರಡುವ ಕಾಲ | ಬೆಳಗ್ಗೆ ೬ -೦೦, ಬೆಳಗ್ಗೆ ೧೦ ೦೦, ಸಂಜೆ ೩--೦೦ |
| ಬಸ್ ಪ್ರಯಾಣದ ದರ | ಒಂದು ಟಿಕೆಟ್ಟಿಗೆ ೨೦ ರೂ ಮಾತ್ರ ಕಿರಿಯರಿಗೆ ಅರ್ಧ ಟಿಕೆಟ್, (ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ) |

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ

**ತಿ ತಿ ದೇ**

# ಕೃಷ್ಣಾನದೀ ತೀರ ಕ್ಷೇತ್ರಗಳು

ನಮಾಮಿ ಸುಕೃತ ಶ್ರೇಣೀಂ
ಕೃಷ್ಣವೇಣೀಂ ತರಂಗಿಣೀಮ್
ಯದ್ವೀಕ್ಷಣಂ ಕೋಟಿಜನ್ಮ
ಕೃತ ದುಷ್ಕರ್ಮ ಶಿಕ್ಷಣಾಮ್

ಪುಣ್ಯಪರಂಪರೆಯನ್ನು ಹೊಂದಿದ ಯಾವ ನದಿಯನ್ನು ದರ್ಶಿಸಿದ ಮಾತ್ರದಿಂದಲೇ ಕೋಟಿಜನ್ಮಗ್ಳಲ್ಲಿನ ದುಷ್ಕೃತಿಗಳು ಶಿಕ್ಷಿತವಾಗುವುವೋ ಅಂತಹ ತರಂಗಿಣಿಯಾದ ಕೃಷ್ಣವೇಣಿಗೆ ನಮಸ್ಕರಿಸುತ್ತೇನೆ

ಕೃಷ್ಣಾನದಿ ದಕ್ಷಿಣಬಾರತದ ಪ್ರಸಿದ್ಧ ನದಿಗಳಲ್ಲಿ ಒಂದು ಮಹಾರಾಷ್ಟ್ರದ ವೃದ್ಧ ಮಾಹೇಶ್ವರದಲ್ಲಿ ಹುಟ್ಟಿ ಕರ್ನಾಟಕದ ಬಿಜಾಪುರ ರಾಯಚೂರು ಪ್ರಾಂತಗಳಲ್ಲಿ ಹರಿದು ಆಂಧ್ರದ ಮಹಬೂಬ್ ನಗರ, ಕರ್ನೂಲು, ಗುಂಟೂರು, ಕೃಷ್ಣಾ ಜಿಲ್ಲೆಗಳಲ್ಲಿ ಹರಡಿ ಎಂಟುನೂರು ಮೈಲಿಗಳ ಪ್ರಯಾಣ ಮಾಡಿ ಘಟಪ್ರಭಾ, ಮಲಪ್ರಬಾ, ತುಂಗಬದ್ರಾ, ಭವನಾಶಿನಿ ಮೊದಲಾದ ಉಪನದಿಗಳನ್ನು ಕೂಡಿಕೊಂಡು, ಆಂಧ್ರಪ್ರದೇಶದ ಹಂಸಲದೀವಿಯ ಬಳಿ ಬಂಗಾಳ ಕೊಲ್ಲಿಯನ್ನು ಸೇರುತ್ತದೆ ಗಂಗಯನ್ನು ವಿಷ್ಣು ಪಾದೋದ್ಭವಾ ಎಂದರು ದಕ್ಷಿಣಬಾರತದ ಸಹ್ಯಾದ್ರಿ ಶಿಖರ ಶ್ರೇಣಿಯಲ್ಲಿ ದೇವತೆಗಳ ಕೋರಿಕೆಯಂತೆ ಅಶ್ವತ್ಥ ವೃಕ್ಷರೂಪವನ್ನು ದರಿಸಿದ ಕೃಷ್ಣ ತನ್ನ ವಾಮಬಾಗದಿಂದ (ರಾದಾರೂಪ) ಕೃಷ್ಣಾನದಿಯನ್ನು ರೂಪಿಸಿದ ಎಂತಲೇ 'ಕೃಷ್ಣೇ ಕೃಷ್ಣಾಂಗ ಸಂಬೂತೇ ಜಂತೂನಾಂ ಪಾಪಹಾರಿಣಿ' ಎಂಬ ಮಾತು ಜನಜನಿತ

ಗುರುವು ಮೇಷಾದಿ ಹನ್ನೆರಡು ರಾಶಿಗಳಲ್ಲಿ ವರ್ಷಕ್ಕೆ ಒಂದು ರಾಶಿಯಂತೆ ಸಂಚರಿಸುವಾಗ, ಆತ ಯಾವ ರಾಶಿಯಲ್ಲಿ ಪ್ರವೇಶಿಸುವನೋ, ಆ ರಾಶಿಗೆ ಸಂಬಂದಿಸಿದ ನದಿಗೆ ಪ್ರವೇಶದ ಹನ್ನೆರಡು ದಿನಗಳ ಪುಷ್ಕರ ಕಾಲವೆನ್ನುವರು ಅದರಂತೆ ಕನ್ಯಾ ರಾಶಿಯಲ್ಲಿ ಗುರುವಿದ್ದಾಗ ಕೃಷ್ಣಾನದಿಗ ಪುಷ್ಕರಗಳು ನಡೆಯುವುವು. (ತುಲಾ ರಾಶಿಯಲ್ಲಿ ಕಾವೇರಿಗೂ, ವೃಶ್ಚಿಕದಲ್ಲಿ ಬೀಮರದಿಗೂ, ಮಕರದಲ್ಲಿ ತುಂಗಬದ್ರೆಗೂ ಪುಷ್ಕರಗಳೆಂದು ಹೇಳಲಾಗಿದೆ) ಹನ್ನೆರಡು ವರ್ಷಕ್ಕೆ ಒಮ್ಮೆ ಘಟಿಸುವ ಪುಷ್ಕರಗಳಲ್ಲಿ ತೀರ್ಥಸ್ನಾನ, ಶ್ರಾದ್ಧಕರ್ಮ, ಜಪತರ್ಪಣಾದಿ ಕ್ರಿಯೆಗಳಿಗೆ ಪ್ರಾಶಸ್ತ್ಯವಿದ್ದು, ಆಂಧ್ರಪ್ರದೇಶದಲ್ಲಿ ಎಲ್ಲೆಡೆಗಳಿಂದಲೂ ಬಾರತದ ಇತರ ನಾನಾಬಾಗಗಳಿಂದಲೂ ನದೀ ತೀರದ ಪವಿತ್ರ ಪುಣ್ಯಕ್ಷೇತ್ರಗಳಿಗೆ ಜನ ಆಗಮಿಸುವರು

ನದೀ ತೀರಗಳಲ್ಲಿ ನಾಗರಿಕತೆ ಬಳೆದದ್ದು ಇತಿಹಾಸ ಅಂತೆಯೇ ಸನಾತನ ದರ್ಮದ ಆರಾದನಾ ಸ್ಥಳಗಳೂ ನದೀ ತೀರಗಳಲ್ಲಿ ಬಳೆದು ಬಕ್ತರನ್ನು ಅನಾದಿಕಾಲದಿಂದಲೂ ಆಕರ್ಷಿಸುತ್ತ ನಡದಿವ ಕೃಷ್ಣಾನದಿಯೂ ಈ ಮಾತಿಗೆ ಅಪವಾದವೇನಲ್ಲ ಚಾಲುಕ್ಯ, ರಾಷ್ಟ್ರಕೂಟ, ಕಳಚುರ್ಯ, ರೆಡ್ಡಿ ರಾಜರುಗಳ ಸಾಮ್ರಾಜ್ಯ ಮಂಡಲೇಶ್ವರ ಮಾನ್ಯಗಳು ಕೃಷ್ಣಾನದೀತೀರದಲ್ಲಿ ಹರಡಿ, ವಿಕಾಸಗೊಂಡವು ದಕ್ಷಿಣಬಾರತದ ಖ್ಯಾತ 'ಮರೆಯಲಾಗದ ವಿಜಯನಗರ' ಸಾಮ್ರಾಜ್ಯವಂತೂ ತುಂಗಬದ್ರಾ ತೀರದ ಹಂಪೆಯಲ್ಲಿ ಹೂವಾಗಿ ಕಾಯಾಗಿ ಹಣ್ಣಾಗಿದ್ದು ಸರ್ವವಿದಿತ ಅಂತೆಯೇ ನಾಗಾರ್ಜುನ ಸಾಗರದ ಬೌದ್ಧ ವಿಶ್ವವಿದ್ಯಾಲಯವೂ, ಅಮರಾವ





ತಿಯ ಸ್ಥೂಪವೂ ಕೃಷ್ಣಾತೀರದಲ್ಲಿ ಸಂಸ್ಕೃತಿ ವಿಕಸನ ಮಾಡಿದ್ದು ಜನಜನಿತ ಇಂತಲ್ಲಿ ಹಲವಾರು ಗುಡಿ ಗೋಪುರಗಳೂ, ಆರಾಮ, ಆಶ್ರಮಗಳೂ ಹರಡಿ ದೆಳೆದರೆ ಆಶ್ಚರ್ಯವೇನು (ಈ ವ್ಯಾಸ ಕೃಷ್ಣಾತೀರದ ಆಂಧ್ರಪ್ರದೇಶ ಕ್ಷೇತ್ರಗಳಿಗೆ ಮಾತ್ರ ಸೀಮಿತ ವಾಗಿದೆ) ಶ್ರೀಶೈಲ, ಅಮರಾವತಿ, ವಿಜಯವಾಡ, ವೇದಾದ್ರಿ, ಶ್ರೀಕಾಕುಳಂ ಮೊದಲಾದವು ಇವುಗಳಲ್ಲಿ ಪ್ರಮುಖವಾದವು.

## ಸಂಗಮೇಶ್ವರ

ಕರ್ನೂಲು ಜಿಲ್ಲಯ ನಂದಿಕೊಟ್ಕೂರು ಗ್ರಾಮಕ್ಕೆ 20 ಮೇಲಿ ದೂರದಲ್ಲಿ ಕೃಷ್ಣಾನದಿ, ತುಂಗಭದ್ರೆ, ಭವನಾಶಿ ನದಿಗಳು ಒಂದಾಗಿ ಸೇರುತ್ತವೆ ಇಲ್ಲಿ ಸಂಗಮೇಶ್ವರ ಆಲಯವಿದೆ ಶ್ರೀಶೈಲದ ಬಳಿ ನದಿಗೆ ಅಣೆಕಟ್ಟೆ ಕಟ್ಟಿದಾಗ ಈ ಆಲಯ ಮುಳುಗಡೆಯಾಗುವ ಸಂಭವವಿದ್ದು ಅದನ್ನು ಸ್ಥಳಾಂತರಿಸಲಾಗುತ್ತಿದೆ (ಕರ್ನಾಟಕದ ಕೂಡಲ ಸಂಗಮದಲ್ಲೂ ಇಂತಹದೇ ಸ್ಥಳಾಂತರಿತ ದೇವಾಲಯವನ್ನು ಕಾಣಬಹುದು)

## ಶ್ರೀಶೈಲ

ಶ್ರೀಶೈಲ ಆಂಧ್ರದಲ್ಲಿದ್ದರೂ ಕನ್ನಡಿಗರಿಗೆ ಬಹು ಹತ್ತಿರ ಕನ್ನಡದ ವಚನಕಾರರೆಲ್ಲರಿಗೂ ಇಲ್ಲಿನ ಮಲ್ಲಿಕಾರ್ಜುನ ಸ್ವಾಮಿ ಬಹು ಹತ್ತಿರದ ದೈವ ಬಹು ಮಂದಿ ಶ್ರೀಶೈಲದ ಕದಳೀವನದಲ್ಲಿ ಐಕ್ಯವಾದ ಐತಿಹ್ಯಗಳುಂಟು ಶ್ರೀಶೈಲದ ದೇವಾಲಯದ ಒಳ ಆವರಣದಲ್ಲಿಯೇ ಅಕ್ಕಮಹಾದೇವಿ ಆಲಯವೂ ಇದೆ ಈ ಚೆನ್ನ ಮಲ್ಲಿಕಾರ್ಜುನ ಕನ್ನಡ ಸಾಹಿತ್ಯದಲ್ಲೂ ತಲುಗು ಸಾಹಿತ್ಯದಲ್ಲೂ ಆಗಾಗ ಅಲ್ಲಲ್ಲಿ ಕೀರ್ತಿಸಲ್ಪಟ್ಟಿದ್ದಾನೆ ಪಾಲ್ಕುರಿಕೆ ಸೋಮನಾದ, ಬೀಮಕವಿ, ಜಕ್ಕನ ಮೊದಲಾದವರು ಹಾಡಿ ಹೊಗಳಿದ ದೈವ ಜಕ್ಕನನ ವಿಕ್ರಮಾರ್ಕ ವಿಜಯದ ಒಂದು ಪದ್ಯ ಹೀಗಿದೆ

ಅದಾವ ಬೆಟ್ಟದ ಶಿಖರಾಗ್ರವನು ನೋಡಿದೊಡೆ
ಬವಬಂದನಗಳಿಲ್ಲ ಪರಿಯುವುವೋ

ಅದಾವ ಗಿರಿಯ ಮನೆಯಲೀಶಾನ
ಪಾರ್ವತೀ ಸಹಿತ ನೆಲೆಸಿರುವನೋ

ಅದಾವ ಗಿರಿಯೊಳಗೆಲ್ಲ ತೀರ್ದಗಳು
ಪಾತಾಳಗಂಗೆಯಾಗಿ ಪರಿದಿಹವೋ

ಅದಾವ ಗಿರಿಯಲಿ ಬ್ರಹ್ಮೇಂದ್ರಾದಿ ದಿವಿಜರು
ಶಬರ ವೇಷಿಗಳಾಗಿ ತಿರುಗುತಿಪರೋ,

ಅಂತಹ ಶ್ರೀಶೈಲವನು ನೋಡಿದವರು
ಪುನ್ನತರ ಪುಣ್ಯವನೆಸಗಿದವರು
ಘನ ತಪ ಪಲ ಸಿದ್ಧಿಯನು ಕಂಡವರು
ಹರನಿಗತ್ಯಂತ ಬಕ್ತ ರಾದಂತಹವರು

ಇಂತಹ ಶ್ರೀಶೈಲ ಕರ್ನೂಲು ಜಿಲ್ಲೆಯ ನಲ್ಲ ಮಲೆ ಪ್ರಾಂತದ ಗಿರಿಕಾನನಗಳ ಮಧ್ಯದಲ್ಲಿದೆ ಬಾರತದ ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಇಲ್ಲಿನ ಸ್ವಯಂಬುವಾದ ಮಲ್ಲಿಕಾರ್ಜುನ ಲಿಂಗವೂ ಒಂದು ಮಲ್ಲಿಕಾರ್ಜುನ ಸ್ವಾಮಿಯ ಬದಿಯಲ್ಲಿಯೇ ಎಡಗಡೆಗೆ ಪಾರ್ವತೀದೇವಿ, ಹಿಂದೆ ಕಿರಿದಾದ ಇನ್ನೊಂದು ಆಲಯದಲ್ಲಿ ಬ್ರಮಾರಾಂಬಿಕೆ ಬ್ರಮರಾಂಬಾ ಅಷ್ಟಾದಶ ಶಕ್ತಿಗಳಲ್ಲಿ ಒಂದು ಕಾಕತೀಯ ರಾಣಿ ರುದ್ರಮದೇವಿ, ವಿಜಯನಗರದ ನರಸಿಂಹರಾಯ, ಕೃಷ್ಣದೇವರಾಯ, ಮರಾಠರ ಶಿವಾಜಿಯೂ ಇಲ್ಲಿ ಸ್ವಾಮಿಯನ್ನು ಪೂಜಿಸಿದ್ದು ಇತಿಹಾಸ ದೇವಾಲಯ 500'x600, ವಿಸ್ತಾರದ ಆವರಣದೊಳಗಿದೆ ಸುತ್ತ ಪ್ರಾಕಾರದ ಎತ್ತರವಾದ ಕಲ್ಲು ಗೋಡೆಗಳ ಮೇಲೆ ಶಿವ ಕದೆಗಳ ಉಬ್ಬು ಶಿಲ್ಪಗಳು ಆಕರ್ಷಣೀಯವಾಗಿವೆ ಅದೇ ಒಂದು ಪ್ರತ್ಯೇಕ ಅದ್ಯಯನಕ್ಕೆ ವಸ್ತುವಾಗುವ ವಿಷಯದಂತಿದೆ

ಇಲ್ಲಿ ಸಂಕ್ರಾಂತಿಯಂದು ಪಾರ್ವತೀ ಕಲ್ಯಾಣವೂ, ಶಿವರಾತ್ರಿಯಂದು ಬ್ರಮರಾಂಬಾ ಕಲ್ಯಾಣವೂ, ನಡೆಯುವುವು. ಇವು ವೈಬವೋಪೇತವಾದ ಉತ್ಸವಗಳು ಇಲ್ಲಿ ಕೃಷ್ಣಾನದಿ ಪಾತಾಳಗಂಗೆಯಾಗಿ ಹರಿಯುತ್ತಿದ್ದು, ದಡದಲ್ಲಿನ ಪಟ್ಟದ ರಸ್ತೆಯಲ್ಲಿ ಶಿಖರೇಶ್ವರವಿದೆ ಅಲ್ಲಿನ ತಿರುಗುಣಿ ಬಸವಣ್ಣನ ವಿಗ್ರ



ಹದ ಕಿವಿಗಳ ಮಧ್ಯದಿಂದ ದೇವಾಲಯದ ಶಿಖರವನ್ನು ನೋಡಿದರೆ ಪುನರ್ಜನ್ಮವಿರದು -- "ಶ್ರೀಶೈಲಂ ಶಿಖರಂ ದೃಷ್ಟ್ವಾ ಪುನರ್ಜನ್ಮ ನ ವಿದ್ಯತೇ"

ಶ್ರೀಶೈಲಕ್ಕೆ ಬಹುತೇಕ ಎಲ್ಲಕಡೆಗಳಿಂದಲೂ ಬಸ್‌ಸೌಕರ್ಯವಿದೆ ಇಲ್ಲಿ ವ್ಯವಸ್ಥಿತವಾದ ವಸತಿ ಸತ್ರಗಳೂ, ಉಂಟು

## *ನಾಗಾರ್ಜುನ ಸಾಗರ*

ಗುಂಟೂರು ಜಿಲ್ಲೆಯ ಮಾಚೆರ್ಲದಿಂದ 15 ಮೈಲಿ ದೂರದಲ್ಲಿ ನಂದಿಕೊಂಡ ಪರ್ವತಗಳ ಮಧ್ಯದಲ್ಲಿ ಕೃಷ್ಣಾನದಿಗೆ ಅಣೆಕಟ್ಟೆಯನ್ನು ಕಟ್ಟಲಾಗಿದೆ 1955 ರಲ್ಲಿ ಆರಂಬವಾದ ಕೆಲಸ 1966 ರವರೆಗೆ ನಡೆದು ಅಂದಿನ ದಿನಗಳಲ್ಲಿ ಸುಮಾರು 150 ಕೋಟಿ ರೂಗಳ ವೆಚ್ಚದಲ್ಲಿ ಪೂರ್ಣಗೊಂಡಿತು ಈ ಅಣೆಕಟ್ಟೆಯ ಎತ್ತರ 570 ಅಡಿಗಳು ಇಲ್ಲಿನ ಇತಿಹಾಸ ಪ್ರಸಿದ್ಧಿಗೆ ಕಾರಣ ನಾಗಾರ್ಜುನ ನಂದಿಕೊಂಡ ಬೆಟ್ಟದ ಮೇಲೆ ಬೌದ್ಧ ವಿಶ್ವವಿದ್ಯಾಲಯದ ಏರ್ಪಾಡಾಗಿದ್ದಿತು ನಾಗಾರ್ಜುನ ಬೌದ್ಧಮತದ ಒಬ್ಬ ಅತಿ ಶ್ರೇಷ್ಠ ವಿದ್ವಾಂಸ, ವಿದ್ಯಾಪ್ರಚಾರಕ ಬೌದ್ಧ ದರ್ಮದ ಉಚ್ಛ್ರಾಯಕಾಲದಲ್ಲಿ ಚೀನಾ, ಜಪಾನ್, ಸಿಂಹಳ, ಬರ್ಮಾ ದೇಶಗಳಿಂದ ಇಲ್ಲಿಗೆ ಶಿಕ್ಷಣಕ್ಕಾಗಿ ವಿದ್ಯಾರ್ಥಿಗಳು ಬರುತ್ತಿದ್ದರಂದು ಹೇಳಲಾಗಿದೆ

## ಅಮರಾವತಿ

ಗುಂಟೂರಿನಿಂದ 20 ಮೈಲಿ ದೂರದ ಅಮರಾವತಿ ಆಂಧ್ರದ ಐದು ಆರಾಮಗಳಲ್ಲಿ ಒಂದು (ಅಮರಾರಾಮ, [illegible]ರಾರಾಮ, ದ್ರಾಕ್ಷಾರಾಮ, ಕೊಮರಾರಾಮ, [illegible]ರಾರಾಮ) ಕೃಷ್ಣ ಇಲ್ಲಿ ಉತ್ತರವಾಹಿ [illegible] ಪ್ರಸಿದ್ಧವಾಗಿರುವ ಈ ಕ್ಷೇತ್ರದ [illegible] ಸ್ವಾಮಿ 15 ಅಡಿ ಎತ್ತರದ 3 ಅಡಿ [illegible] ಎಂತಲೇ ಅಟ್ಟದ [illegible] ಅಭಿಷೇಕ ಮಾಡುತ್ತಾರೆ ಆಲಯದ [illegible] ವಿಗ್ರಹವಿದೆ

ಅಮರ [illegible] ನಿರ್ಮಿತವಾದ ಪಟ್ಟಣವಾಗಿ ಅಮರಾವತಿ ಎಂಬ ಹೆಸರು ಈ ಕ್ಷೇತ್ರದ ಬಳಿಯ ದಾನ್ಯಕಟಕ [illegible] ಖ್ಯಾತ ಬೌದ್ಧ ವಿದ್ಯಾಕೇಂದ್ರವೂ ಆಗಿದ್ದಿತು ಎಂಬುದು ಇಲ್ಲಿನ ಐತಿಹಾಸಿಕ [illegible] ಸಾಕ್ಷಿ ಇಲ್ಲಿ 60 ಸಾವಿರ ವಿದ್ಯಾರ್ಥಿಗಳೂ, 2000 ಅಧ್ಯಾಪಕರೂ ಇದ್ದರು ಇಲ್ಲಿನ ಸ್ತೂಪದ ಗುರುತುಗಳನ್ನು ಮದರಾಸು ಪ್ರಾಚ್ಯವಸ್ತು ಪ್ರದರ್ಶನ ಶಾಲೆಯಲ್ಲಿ ಕಾಣಬಹುದು ಮಿಕ್ಕ ವಿಗ್ರಹ, ಮೂರ್ತಿ [illegible] ಇಲ್ಲಿಯೇ ಪ್ರಾಚ್ಯ ವಸ್ತು ಸಂಗ್ರಹಾಲಯದಲ್ಲಿವೆ ಶಾತವಾಹನರು, ಕೊಂಡವೀಡು ಪ್ರಭುಗಳು ಆಳಿದ ಅಮರಾವತಿಯಲ್ಲಿನ ಗುಡಿಯನ್ನು ಕ್ರಿಶ 1797 ರಲ್ಲಿ ವಾಸಿರೆಡ್ಡಿ ವೆಂಕಟಾದ್ರಿನಾಯಕನು ಜೀರ್ಣೋದ್ಧಾರಗೊಳಿಸಿದ ಹಾಗಾಗಿ ಅವನದೆಂದು ಹೇಳಲಾಗುವ ವಿಗ್ರಹವೂ ಗುಡಿಯಲ್ಲಿದೆ ಶ್ರೀಕೃಷ್ಣದೇವರಾಯ ಇಲ್ಲಿಗೆ ಆಗಮಿಸಿ ಇಲ್ಲಿ ತುಲಾಬಾರ ಸೇವೆಸಲ್ಲಿಸಿದನೆನ್ನುತ್ತಾರೆ



## ವಿಜಯವಾಡ

ವಿಜಯಪುರ, ಬೆಜವಾಡ ಎಂಬ ಹೆಸರುಗಳಿಂದಲೂ ಖ್ಯಾತವಾದ ವಿಜಯವಾಡ ಆಂಧ್ರಪ್ರದೇಶದ ಮುಖ್ಯ ನಗರಗಳಲ್ಲಿ ಒಂದಾಗಿದೆ ಇಲ್ಲಿನ ನದೀ ತೀರದ ಇಂದ್ರಕೀಲಾದ್ರಿಯಲ್ಲಿ ಕನಕದುರ್ಗಾ ದೇವಾಲಯ ಪುರಾಣೇತಿಹಾಸ ಪ್ರಸಿದ್ಧ

ರಾಕ್ಷಸರಾದ ಶುಂಬ ನಿಶುಂಬರ ಸಂಹಾರಾನಂತರ ದುರ್ಗೆಯು ದೇವತೆಗಳ ಕೋರಿಕೆಯ ಮೇರೆಗೆ ಕನಕವರ್ಷವನ್ನು ಸುರಿಸಿದಳೆಂದೂ ಆದ್ದರಿಂದಲೇ ಈಕೆಗೆ ಕನಕದುರ್ಗಾ ನಾಮವಾಯಿತೆಂದೂ ಹೇಳುವರು ಇಲ್ಲಿನ ಆಲಯವನ್ನು 10 ನೇ ಶತಾಬ್ದಿಯಲ್ಲಿ ವೆಂಗಿಚಾಳುಕ್ಯ ತ್ರಿಬುವನ ಮಲ್ಲನು ಕಟ್ಟಿಸಿದ ಇಲ್ಲಿಯೇ ಶಿವನನ್ನು ಮೆಚ್ಚಿಸಿ ಪಾರ್ಥನು ಪಾಶುಪತಾಸ್ತ್ರ ಸಂಪಾದಿಸಿದ್ದು ಇಲ್ಲಿಯೇ ದುರ್ಗಾ ಮಲ್ಲೇಶ್ವರಾಲಯವೂ ಇದೆ ಇಲ್ಲಿ ಅಗಸ್ತ್ಯರು ಈಶ್ವರನನ್ನು ಅರ್ಚಿಸಿದರು ಎನ್ನುವರು ಈ ದೇವಾಲಯಗಳ ಐತಿಹಾಸಿಕತೆಗೆ ಅನೇಕ ಶಾಸನಾದಾರಗಳೂ ಉಂಟು

ಇಲ್ಲಿನ ಉಂಡವಲ್ಲಿ ಗ್ರಾಮದ ಬೆಟ್ಟಗಳಲ್ಲಿ ಗುಹಾಂತರ್ದೇವಾಲಯಗಳಿವೆ ಇಲ್ಲಿನ ಮುಖ್ಯ ದೇವತೆ ಅನಂತಪದ್ಮನಾಭಸ್ವಾಮಿ ಸುಮಾರು 17 ಅಡಿ ಉದ್ದದ ಶ್ರೀರಂಗದ ಸ್ವಾಮಿಯನ್ನು ಹೋಲುವ ಸ್ವಾಮಿ ಆಕರ್ಷಕ ಇಲ್ಲಿನ ಇತರ ವಿಗ್ರಹ ಶಿಲ್ಪಗಳೂ ರಮಣೀಯವಾಗಿವೆ

ರಾಜೇಂದ್ರ ಚೋಳಪುರವೆಂದು ಶಾಸನಗಳಲ್ಲಿ ಹೆಸರಾದ ವಿಜಯವಾಡದ ಬೆಟ್ಟಗಳಲ್ಲಿ ಸುರಂಗ ಮಾಡಿಕೊಂಡು (ಬೆಜ್ಜ -- ರಂಧ್ರ) ಕೃಷ್ಣೆ ಪ್ರವಹಿಸಿದ್ದರಿಂದಾಗಿ ಇದು ಬೆಜ್ಜವಾಡ -- ಬೆಜವಾಡ -- ವಿಜಯವಾಡ ಆಯಿತೆಂದು ಹೇಳುವರು

1850 ರಿಂದ 1858 ರವರೆಗೆ ಕೆಲಸಮಾಡಿ ಸರ್ ಆರ್ಥರ್ ಕಾಟನ್ ಇಲ್ಲಿ ಕೃಷ್ಣಾನದಿಗೆ 3713 ಅಡಿ ಉದ್ದದ ಅಣೆಕಟ್ಟೆಯನ್ನು ಕಟ್ಟಿದ ಇಲ್ಲಿನ ನದಿಯ ಮೇಲಿನ ರಸ್ತೆ ರೈಲು ಸೇತುವೆಗಳೂ ದರ್ಶನೀಯವಾಗಿವೆ ವಿಜಯವಾಡಕ್ಕೆ ಬೆಂಗಳೂರಿನಿಂದಲೂ ಬಸ್ ವ್ಯವಸ್ಥೆಯಿದೆ ಮದರಾಸು ಕಲ್ಕತ್ತ ರೈಲು ಮಾರ್ಗದ ಮುಖ್ಯ ಕೇಂದ್ರವೂ ಆಗಿರುವುದರಿಂದ ಪ್ರಯಾಣ ಸೌಕರ್ಯಗಳು ಯದೇಚ್ಛ, ವಸತಿಸೌಕರ್ಯಗಳೂ ಉಂಟು

## ವೇದಾದ್ರಿ

ಜಗ್ಗಯ್ಯಪೇಟೆಗೆ 10 ಮೈಲಿದೂರದಲ್ಲಿರುವ ಕೃಷ್ಣಾತೀರದ ಊರು ಇಲ್ಲಿ ಬ್ರಹ್ಮೇಶ್ವರ ಪರ್ವತಗಳ ನಡುವೆ ಉತ್ತರ ವಾಹಿನಿಯಾದ ಕೃಷ್ಣೆ ಇಲ್ಲಿನ ದೇವಾಲಯ ನರಸಿಂಹ ಸ್ವಾಮಿಯದು ಯೋಗಾಲಕ್ಷ್ಮೀ ನರಸಿಂಹಸ್ವಾಮಿ ಎಂಬ ಅಬಿದಾನ ವೇದಗಳು ತಮ್ಮ ಶಿರದಲ್ಲಿರಲು ಸ್ವಾಮಿಯನ್ನು ಪ್ರಾರ್ಥಿಸಿದವಂತೆ, ಸ್ವಾಮಿ ವೇದಾದ್ರಿಯ ಬಳಿ ನದಿಯಲ್ಲಿ ಸಾಲಿಗ್ರಾಮ ರೂಪದಲ್ಲಿರಲು ಅವುಗಳಿಗೆ ಅಪ್ಪಣೆ ನೀಡಿದನಂತೆ ಪ್ರಹ್ಲಾದನಿಗೆ ಯೋಗ ಶಿಕ್ಷಣ ನೀಡಿದ ನರಸಿಂಹಸ್ವಾಮಿ, ರಾಜ್ಯಲಕ್ಷ್ಮೀದೇವಿ, ಚೆಂಚುಲಕ್ಷ್ಮಿಯರೊಂದಿಗಿದ್ದಾನೆ ಇಲ್ಲಿ ವಿಜಯವಾಡದಿಂದ ಬಂದು ಹೋಗುವ ಸೌಕರ್ಯವಿದೆ ಯಾತ್ರಿಕರಿಗೆ ವಸತಿಸೌಕರ್ಯವೂ ಇಲ್ಲುಂಟು

## ಶ್ರೀಕಾಕುಳಂ

ಮಚಲೀ ಪಟ್ಟಣದಿಂದ 25 ಮೈಲಿ ದೂರದ ಶ್ರೀಕಾಕುಳಂ ಆಂಧ್ರ ಮಹಾವಿಷ್ಣು ಆಲಯಕ್ಕೆ ಪ್ರಸಿದ್ಧಿ ಪಡೆದಿದೆ ಸ್ಥಳ ಪುರಾಣ ಹೇಳುವಂತೆ ಇಲ್ಲಿ ದೇವರನ್ನು ಅತ್ರಿಮಹರ್ಷಿ ಪ್ರತಿಷ್ಠಾಪನೆ ಮಾಡಿದ ಇಲ್ಲಿಗೆ ಪ್ರತ್ಯೇಕ ವೈಶಿಷ್ಟ್ಯ ಉಂಟಾಗಲು ಕಾರಣ ಶ್ರೀಕೃಷ್ಣದೇವರಾಯ ಆತ ಸ್ವಾಮಿಯನ್ನು ದರ್ಶಿಸಿದಾಗ ಸ್ವಾಮಿ ಆತನಿಗೆ "ಆಮುಕ್ತ ಮಾಲ್ಯದ" ಕಾವ್ಯವನ್ನು ಬರೆಯ ಹೇಳಿದ್ದರಿಂದ, ಕೃಷ್ಣದೇವರಾಯ ಕಾವ್ಯರಚನೆಯಲ್ಲಿ ತೊಡಗಿದನಂತೆ

ಇಲ್ಲಿ ಶಿವಾಲಯವೊಂದು ಸಹ ಇದೆ ಗಂಗಾ ಪಾರ್ವತೀ ಸಹಿತ ಶ್ರೀ ಮಲ್ಲಿಕಾರ್ಜುನ ಸ್ವಾಮಿ ಇಲ್ಲಿ ನೆಲೆಸಿದ್ದಾನೆ

## ಮೋಪಿದೇವಿ

ಕೃಷ್ಣಾ ಜಿಲ್ಲೆಯ ಚಲ್ಲಪಲ್ಲಿಯಿಂದ ಐದು ಮೈಲು ದೂರದ ಊರು ಇದು ಇಲ್ಲಿ ಶ್ರೀ ಸುಬ್ರಹ್ಮಣ್ಯೇಶ್ವರ ಆಲಯವಿದೆ ಲಿಂಗಾಕಾರದ ಈ ಮೂರ್ತಿಯನ್ನು ಅಗಸ್ತ್ಯ ಮಹರ್ಷಿ ಪ್ರತಿಷ್ಠಾಪಿಸಿದರೆಂದು ಸ್ಥಳ ಪುರಾಣ ಹೇಳುತ್ತದೆ ಈ ಆಲಯದ ಬದಿಗೇ ಸಕಲೇಶ್ವರ ಸ್ವಾಮಿ ದೇವಾಲಯ ಅಲ್ಲಿನ ಲಿಂಗ ಪಾತಾಳದವರೆಗೆ ಇದೆಯೆಂದು ಹೇಳುತ್ತಾರೆ

## ಹಂಸಲ ದೀವಿ

ಕೋಡೂರಿನಿಂದ 4 ಮೈಲು ದೂರದಲ್ಲಿ ಪರಮಹಂಸರು ದರ್ಶಿಸುತ್ತಿದ್ದ ಕ್ಷೇತ್ರವಾದ ಹಂಸಲದೀವಿ ಕೃಷ್ಣಾನದಿ ಸಾಗರವನ್ನು ಸೇರುವ ಸ್ಥಳದಲ್ಲಿದೆ ಇಲ್ಲಿ ವೇಣುಗೋಪಾಲಸ್ವಾಮಿ ಆಲಯವಿದೆ ಕಾಸುರ ಪುರುಷೋತ್ತಮಕವಿ ಹಂಸಲದೀವಿ ಗೋಪಾಲಶತಕವನ್ನು ಬರೆದಿದ್ದಾನೆ ಈ ಆಲಯವನ್ನು ಚೋಳರು ಪಾಂಡ್ಯರ ಕಾಲದಲ್ಲಿ ನಿರ್ಮಿಸಿದಂತೆ ತೋರಿಬರುತ್ತದೆ

ತೆಲುಗು ಮೂಲ ಜಿ ಬಾಲಸುಬ್ರಹ್ಮಣ್ಯಂ,
ಡಿ ವಿ ಸುಬ್ಬಾರಾವು,
ಜಿ ಎಸ್ ಮೋಹನ್,
ರಾಗಂ ವೆಂಕಟೇಶ್ವರುಲು-



# ಮಹಾಮಾತೆ ರಾಣೂಬಾಯಿ

---ರಮಸುತ

ಕ್ರಿ.ಶ ೧೩ ನೇ ಶತಮಾನದ ನಂತರದಲ್ಲಿ ಭಾರತೀಯರಲ್ಲಿ ಭಕ್ತಿ ಪಂಥವು ಮಾನವತ್ವದ ಹೊಸ ಸ್ಫೂರ್ತಿಯನ್ನು ತುಂಬಿತು ಅಂದಿನ ಬಾರತದ ಎಲ್ಲ ರಾಜ್ಯಗಳಲ್ಲೂ ಈ ಕಾರ್ಯ ಮುಂದುವರಿಯಿತು ಕರ್ನಾಟಕದಲ್ಲಿ ಈ ಕಾರ್ಯವನ್ನು ವಚನಕಾರರು ನಡೆಯಿಸಿದಂತೆ, ಮಹಾರಾಷ್ಟ್ರದಲ್ಲಿ, ಈ ನಂತರದ ಕಾಲದಲ್ಲಿ ಜ್ಞಾನೇಶ್ವರ, ತುಕಾರಾಂ ಹಾಗೂ ರಾಮದಾಸ್‌ರಂತಹವರು ಈ ಕಾರ್ಯವನ್ನು ಮುಂದುವರಿಸಿ, ಪರಮಾತ್ಮನ ಪೂಜೆ, ಆ ಪರಮಾತ್ಮನ ಕಣ್ಣುಗಳಲ್ಲಿ ಎಲ್ಲ ಮಾನವರೂ ಸಮಾನರು ಎನ್ನುವ ತತ್ವವನ್ನು ಬೋದಿಸಿದರು ಇವರಲ್ಲಿ ಸಮರ್ದ ರಾಮದಾಸರ ಮಾನವ ಸೇವೆಯಂತೂ ಅಪ್ರತಿಹತವಾದುದು

ಸಮರ್ಥ ರಾಮದಾಸರು (ಕ್ರಿ.ಶ **ಸುಮಾರು** ೧೬೦೮--) ಪರಮಾತ್ಮನನ್ನು ಅನ್ವೇಷಿಸುವ 'ಸಮರ್ದ' ತಪಸ್ವಿಗಳೇ ಆಗಿರದೆ ತಮ್ಮ ಕಾಲದ ಓರ್ವ ರಾಜಕೀಯ ತತ್ವವೇತ್ತರೂ ಆಗಿದ್ದರು ದೇವರ ಅನ್ವೇಷಣೆಯಲ್ಲಿ ತಮ್ಮನ್ನು, ತಮ್ಮ ಸಮಾಜ, ತಮ್ಮ ಜನವನ್ನು ಇವರು ಮರೆಯಲಿಲ್ಲ ಅಂದಿನ ಸಮಾಜದ ಆಗು ಹೋಗುಗಳು, ಮುಸಲ್ಮಾನರ ಅನಾವಶ್ಯಕ ದಾಳಿಗಳು, ಹಿಂದೂತ್ವದ ನಿರ್ನಾಮಕ್ಕಾಗಿ ಸುತ್ತಲಿನ ಸಾಮಾಜಿಕರು ನಡೆಸುತ್ತಿರುವ ಅತ್ಯಾಚಾರ -- ಇತ್ಯಾದಿಗಳನ್ನು ಗಮನಿಸಿದ ರಾಮದಾಸರು ಅವುಗಳ ನಿರ್ಮೂಲನಕ್ಕಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟರು ಬಾಲ್ಯದಲ್ಲಿಯೇ ಈ ಸಮಸ್ಯೆಗಳ ಕಡೆ ಅವರ ಗಮನ ಸೆಳೆದು, ಅವರನ್ನು ಓರ್ವ ಸಮರ್ದ ಸೇವಾಕಾಂಕ್ಷೆಯನ್ನಾಗಿ ಮಾಡಿದ ಕೀರ್ತಿ ಅವರ ತಾಯಿಯವರಾದ ರಾಣೂಬಾಯಿಯವರಿಗೆ ಸೇರಬೇಕು

ಬಾಲ್ಯದಿಂದಲೇ ರಾಮದಾಸರಲ್ಲಿ ರಾಷ್ಟ್ರೀಯ ಪ್ರೇಮ ಬೆಳೆಯುವಂತೆ ಮಾಡಿದವರೆಂದರೆ ಅವರ ತಾಯಿಯವರೇ! ಅವರಲ್ಲಿನ ಬಾಲ್ಯದಿಂದ ಬೆಳೆದು ಬಂದ ಈ ಭಾವನೆ, ಮುಂದೆ ಶಿವಾಜಿಯನ್ನು ತಲುಪಿ, ಆತನ ರಾಜಕೀಯ ತತ್ವವು ಬವ್ಯವೂ, ಸುಂದರವೂ ಆಗಿ ರೂಪುಗೊಳ್ಳುವುದರಲ್ಲಿ ಸಹಾಯ ಮಾಡಿತು ಶಿವಾಜಿಯಲ್ಲಿ ರಾಷ್ಟ್ರೀಯ ಪುನರುತ್ಥಾನದ ಅನನ್ಯಪರಿಣಾಮಕ ಭಾವವು ರೂಪುಗೊಳ್ಳುವುದರಲ್ಲಿ ಆತನ ತಾಯಿ, ಜೀಜಾಬಾಯಿಯ ಪಾತ್ರವು ಎಷ್ಟು ಮಹತ್ವವಾದದ್ದೊ, ಸಮರ್ದ ರಾಮದಾಸರಲ್ಲಿ ಇದೇ ಭಾವನೆ ಮೂಡಲು ಅವರ ತಾಯಿ ರಾಣೂಬಾಯಿಯವರ ಪಾತ್ರವೂ ಅಷ್ಟೇ ಮಹತ್ತರವಾದುದು

ಒಮ್ಮೆ ತನಗೆ ರಾಜಕೀಯ ತತ್ವದ ದೀಕ್ಷೆ ಕೊಡುವಂತೆ ಶಿವಾಜಿಯು ತುಕಾರಾಮರನ್ನು ಕೇಳಿಕೊಂಡನಂತೆ ಆಗಿನ್ನೂ ಶಿವಾಜಿಗೆ ಸಮರ್ದ ರಾಮದಾಸರು ಪರಿಚಯವೂ ಆಗಿರಲಿಲ್ಲ, ಅವರ ಪ್ರಬಾವವನ್ನೂ ಅರಿತಿರಲಿಲ್ಲ ತುಕಾರಾಂರವರು ಶಿವಾಜಿಯ ಬೇಡಿಕೆಯನ್ನು ಆಲಿಸಿ, ಸುಮ್ಮನೆ ನಕ್ಕರಷ್ಟೆ, ಕಣ್ಣು ಮುಚ್ಚಿ ದ್ಯಾನಿಸಿ, ನಂತರ ಕಣ್ಣು ತೆರೆದು,

"ರಾಜನ್, ನಿಮ್ಮ ಈ ಬೇಡಿಕೆಯನ್ನು ನಾನು ನೆರವೇರಿಸಲಾರೆನು ಈ ನಿಟ್ಟಿನಲ್ಲಿ ನಾನೊಬ್ಬ ಪಂಗು ನಿಮ್ಮ ಈ ಕಾರ್ಯಕ್ಕೆ ರಾಮದಾಸರೇ ಸಮರ್ದರು ಅವರನ್ನು ಶರಣು ಹೋದರೆ ನಿಮ್ಮ ಕಾರ್ಯವು ಸಿದ್ಧಿಸುವುದು !"

ಎಂದು ಶಿವಾಜಿಯನ್ನು ಸಮರ್ದ ರಾಮದಾಸರ ಕಡೆಗೆ ಕಳುಹಿಸಿ, ಸೂಕ್ತ ಗುರುವಿನ ದರ್ಶನ ಮಾಡಿಸಿದರು ಅಂದಿನಿಂದಲೇ ಶಿವಾಜಿಗೆ ರಾಮದಾಸರು ಹಿಂದೂ ದರ್ಮದ, ಅದರ ಮೂಲತತ್ವಗಳ, ರಾಜಕೀಯ ತಿಳುವಳಿಕೆ ಹಾಗೂ ತತ್ವಗಳ ಹಾಗೂ ಸಂಪೂರ್ಣ ಮಾನವತ್ವದ ಮಾರ್ಗದರ್ಶಕರಾದರು ಅಪರೋಕ್ಷವಾಗಿ ಈ ಎಲ್ಲ ಕಾರ್ಯಗಳಿಗೂ ಸಮರ್ದ ರಾಮದಾಸರ ಮಾತೆಯವರಾದ ರಾಣೂಬಾಯಿಯೇ ಕಾರಣಳು

ಮಹಾರಾಷ್ಟ್ರದ ಜಾಂಬ್ ಎಂಬ ಸಣ್ಣ ನಗರದಲ್ಲಿ ಅಂದು ಶ್ರೀರಾಮನವಮಿ ಹಬ್ಬ, ಅಲ್ಲಿನ ಶ್ರೀರಾಮದೇವಾಲಯದಲ್ಲಿ ವಿಶೇಷ ಪೂಜೆ ಹಾಗೂ ಬಜನೆಗಳು ನಡೆಯುತ್ತಿದ್ದವು. ಅಲ್ಲಿಗೆ ಬಂದಿದ್ದ ಭಕ್ತರಲ್ಲಿ ಸೂರ್ಯಾಜಿ ಪಂತ್ ದೋಸರ್ ಎನ್ನುವಾತನೂ ಒಬ್ಬ, ಪೂಜೆ ನಡೆಯುತ್ತಿದೆ ಆಗ ಇದ್ದಕ್ಕಿದ್ದಂತೆ ಸೂರ್ಯಾಜಿ ಪಂತನ ಬಳಿಗೆ ಓರ್ವನೆಂಟ ಬಂದು ಆತನಿಗೆ ಮಗ ಹುಟ್ಟಿರುವುದಾಗಿ ತಿಳಿಸಿದ

ಶ್ರೀರಾಮನು ಜನಿಸಿದ ವೇಳೆಗೆಯಲ್ಲಿಯೇ ತನ್ನ ಮಗನೂ ಹುಟ್ಟಿದ್ದರಿಂದ, ತನ್ನ ಮಗನು ರಾಮನ ಅನುಗ್ರಹದಿಂದ ಹುಟ್ಟಿರುವವನು ಎಂದು ಸೂರ್ಯಾಜಿ ಪಂತನು ಭಾವಿಸಿದನು ತನ್ನ ಮೇಲೆ ದೇವರು ತೋರಿಸಿರುವ ಕೃಪೆ ಎಂದುಕೊಂಡನು

ಸ್ವಲ್ಪ ಸಮಯದ ನಂತರ ಸೂರ್ಯಾಜಿಪಂತ್ ಹಾಗೂ ರಾಣೂಬಾಯಿರವರುಗಳು ತಮ್ಮ ಮಗುವನ್ನು ಕರೆದುಕೊಂಡು, ಪೈರಣಕ್ಕೆ ಹೋದರು ಅಲ್ಲಿ ಖ್ಯಾತ ಸಂತನಾದ ಏಕನಾದನ ಪಾದದ ಬಳಿ ಆ ಶಿಶುವನ್ನು ಇರಿಸಿದರು ಆ ಸಂತನು ಆ ಶಿಶುವನ್ನು ನೋಡಿ, ಆ ಮುಖದಲ್ಲಿನ ತೇಜಸ್ಸು ಹಾಗೂ ಚಕ್ಷುಗಳಲ್ಲಿನ ಜ್ಞಾನ ಪಿಪಾಸತೆಗಳನ್ನು ಗಮನಿಸಿ, ದಂಗುಬಡಿದವನಂತಾದನು ಅದೊಂದು ಅದ್ಬುತ ಶಿಶು ಎಂದೇ ತಿಳಿದನು ಒಂದೆರಡು ಕ್ಷಣ ಕಣ್ಣು ಮುಚ್ಚಿ ಭವಿಷ್ಯದ ಬಗ್ಗೆ ಚಿಂತಿಸಿದನು ಅವರ ಅರಿವಾಗಿ, ತುಂಬು ಸಂತಸದಿಂದ ಕಣ್ತೆರೆದು,

"ಈ ಮಗು ನಮ್ಮ ಪವಿತ್ರ ಜನ್ಮಭೂಮಿಯ ಲೌಕಿಕ ಹಾಗೂ ಆದ್ಯಾತ್ಮಿಕ, ದಾರ್ಮಿಕ ಜಗತ್ತಿನ ಉದ್ಧಾರಕನಾಗುವನು, ಅವುಗಳ ಸಂರಕ್ಷಕನಾಗುವನು ಅಂತಹ ಸೇವೆ ಮಾಡುವುದಕ್ಕಾಗಿಯೇ ಜನಿಸಿದವನು ನನ್ನ ಸಂದೇಶವನ್ನು ಇನ್ನೂ ಹೆಚ್ಚಿನ ಪ್ರಮಾಣ ಹಾಗೂ ಬವ್ಯತೆಯ ಕಡೆಗೆ ಖಂಡಿತ ಕರೆದೊಯ್ಯುವಂತಹವನು ಅದರಿಂದ ಈ ಮಗುವಿನ ಬಗೆಗೆ ಎಚ್ಚರದಿಂದಿರಿ"

ತಂದೆ, ತಾಯಿಯರಿಬ್ಬರಿಗೂ ಇದನ್ನು ಆಲಿಸಿ ಸಂತೋಷವಾಯಿತು ಅವರುಗಳು ತಮ್ಮ ಊರಿಗೆ ಹಿಂತಿರುಗಿದರು ಆ ಶಿಶುವಿಗೆ ನಾರಾಯಣ ಎಂದು ಹೆಸರಿಟ್ಟರು ಅವನಿಗೆ ಶ್ರೀರಾಮ ಎಂಬ ಹೆಸರಿಡಬೇಕೆಂಬ ಆಸೆ ತುಂಬಾ ಇತ್ತು ತಾಯಿಗೆ ಆದರೆ ಕಾರಣಾಂತರಗಳಿಂದ ಇಡಲಿಲ್ಲ ನಾರಾಯಣ ಎಂದೇ ಇಟ್ಟರು

ಶಿಶುವು ಬಾಲಕನಾಗಿ, ಮಾತನಾಡುವುದನ್ನು ಕಲಿತಾಗ ರಾಣುಬಾಯಿಗೆ ಆದ ಸಂತೋಷ ಅಷ್ಟಿಷ್ಟಲ್ಲ ಅವನು ಚುರುಕು ಬುದ್ಧಿಯವನೆಂಬುದನ್ನು ಆಕೆ ಬಹಳ ಬೇಗ ಅರಿತಳು ಸಂತ ಏಕನಾದರ



# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ವಿರಬಹುದು ತಿರುಪತಿ ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ

## ದರ್ಶನ ಹಾಗೂ ಸೇವಾ ವಿವರಗಳು

| ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ | | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5 -00 ಪ್ರಾ 5--30 | ಪ್ರಾ 5 00 ಪ್ರಾ 5 30 |
| ವಿಶ್ವರೂಪ ಸರ್ವದರ್ಶನ | ಪ್ರಾ 5 30 ಪ್ರಾ 6 00 | ಪ್ರಾ 5 30 ಪ್ರಾ 6--00 |
| ತೋಮಾಲ, ಕೊಲುವು | | |
| ಪಂಚಾಂಗಶ್ರವಣ | ಪ್ರಾ 6 00 ಪ್ರಾ 6--30 | ಪ್ರಾ 6 00 ಪ್ರಾ 6 30 |
| ಸಹಸ್ರನಾಮಾರ್ಚನೆ | ಪ್ರಾ 6 30 ಪ್ರಾ 7 00 | ಪ್ರಾ 6 30 ಪ್ರಾ 7 00 |
| ಮೊದಲನೇ ಗಂಟೆ | ಪ್ರಾ 7 00 ಪ್ರಾ 7--30 | ಪ್ರಾ 7 00 ಪ್ರಾ 7 30 |
| ಸರ್ವದರ್ಶನ | ಪ್ರಾ 7--30 ಪ್ರಾ 10 00 | *ಅಬಿಷೇಕ ಪ್ರಾ 7 30 ಪ್ರಾ 8 -30 |
| | | ಸಮರ್ಪಣ ಪ್ರಾ 8 30 ಪ್ರಾ 9 30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10--00 ಪ್ರಾ 10--30 | ಪ್ರಾ 9 30 ಪ್ರಾ 10 30 |
| *ಆರ್ಜಿತ | | ಕಲ್ಯಾಣೋತ್ಸವ ಪ್ರಾ 10 30 ಮ 12 00 |
| ಸರ್ವದರ್ಶನ | ಪ್ರಾ 10- 30 ಸಂ 6 30 | ಪ್ರಾ 10 30 ಸಂ 6 30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6- 30 ರಾ 7 00 | ಸಂ 6 30 ರಾ 7 00 |
| ಸರ್ವದರ್ಶನ | ರಾ 7 00 ರಾ 8- 45 | ರಾ 7--00 ಪ್ರಾ 8- 45 |
| ಏಕಾಂತ ಸೇವೆ | ರಾ 8- 45 ರಾ 9 00 | ರಾ 8 45 ರಾ 9 00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ 200- 00 |
| * ಅಬಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ 100 00 |
| ಅರ್ಚನೆ (ಒಂದು ವರ್ಷ) | ರೂ 42 00 |
| ಶಾಶ್ವತ ನಿತ್ಯಾರ್ಚನೆ | ರೂ 542 00 |

ಮಾತು ಆಕಯ ಮನಸ್ಸಿನಲ್ಲಿ ಅಚ್ಚೊತ್ತಿದಂತಾಗಿತ್ತು ತನ್ನ ಮಗ ಏಕನಾದರ ತರಹ ಆಗಬೇಕೆಂಬುದು ಆಕೆಯ ಇಚ್ಛೆಯಾಗಿತ್ತು ಹತ್ತು ಜನಕ್ಕೆ ದಾರಿ ತೋರುವವನಾಗಬೇಕು, ತನ್ನ ಮಗ, ಬಡಬಗ್ಗರ ಹಾಗೂ ಅದೋದ ಜನರ ಮಾರ್ಗದರ್ಶಕನಾಗಬೇಕೆಂದು ಆಕೆ ಆಶಿಸುತ್ತಿದ್ದಳು ಇದಕ್ಕಾಗಿ ಆಕೆ ಅನೇಕ ದಾರ್ಮಿಕ ಗ್ರಂದಗಳನ್ನು ಸ್ವತ ಅಬ್ಯಾಸ ಮಾಡಿದಳು ಅವುಗಳಲ್ಲಿನ ಸತ್ಯವನ್ನು ಮನದಟ್ಟು ಮಾಡಿಕೊಂಡಳು

ಅದೊಂದು ದಿನ ಬೆಳಗಿನ ಜಾವವಾಗುವುದಕ್ಕೆ ಸ್ವಲ್ಪಸಮಯವಿದೆ ಇದ್ದಕ್ಕಿದ್ದಂತೆ ರಾಣುಬಾಯಿಗೆ ಎಚ್ಚರವಾಯಿತು ಯಾವಾಗಲೂ ಮಗನನ್ನು ಪಕ್ಕದಲ್ಲಿ ಮಲಗಿಸಿಕೊಂಡಿರುವುದೇ ಆಕೆಗೆ ರೂಡಿ ಅಂತೆಯೇ ಇಂದೂ ಕೂಡ

ಪಕ್ಕದಲ್ಲಿ ನೋಡಿದಳು ಅಷ್ಟು ದೂರದಲ್ಲಿದ್ದ ದೇವರ ಬಳಿಯಲ್ಲಿನ ನಂದಾ ದೀಪದ ಮಸಕು ಬೆಳಕು ಅಲ್ಲೆಲ್ಲ ಪರಡಿತ್ತು ಆ ಬೆಳಕಿನಲ್ಲಿ ತನ್ನ ಮಗನಲ್ಲದೆ ಬೇರೆ ಯಾವುದೋ ವಸ್ತುವು ಮಲಗಿರುವಂತೆ ಕಂಡಳು ಹಾಗೇ ದೃಷ್ಟಿಯಿರಿಸಿ ನೋಡಿದಳು ತನ್ನ ಮಗುವಿನ ಸುತ್ತಲೂ ಬೆಳಕಿನ ಪ್ರಬಾವಳಿಯೊಂದು ಇರುವಂತಿದೆ ಆದರೆ ತನ್ನ ಮಗುವಲ್ಲ ಅದು, ಆಂಜನೇಯನು ಸಣ್ಣರೂಪದಲ್ಲಿ ತನ್ನ ಪಕ್ಕದಲ್ಲಿರುವಂತಿದೆ ನೋಡಿ ಗಾಬರಿಗೊಂಡಳು ತನ್ನ ಮಗು ಎಲ್ಲಿಯೋ ತಪ್ಪಿಸಿಕೊಂಡು ಹೋಗಿದೆ, ಅದವಾ ಯೋರೋ ಎತ್ತಿಕೊಂಡು ಹೋಗಿದ್ದಾರೆ ಬದಲಾಗಿ ಒಂದು ಕೋತಿಯನ್ನು ತಂದು ಮಲಗಿಸಿದಾರೆ ಎಂದುಕೊಂಡಳು ಕೈ ಚಾಚಿ, ಸ್ಪರ್ಶಿಸಿದಳು ಹೌದು, ನಿಜ, ಮೈಯೆಲ್ಲ ಕೂದಲು, ಕಬ್ಬಿಣ ಅಲಗಿನಂತಿದೆ ಕೈಕಾಲುಗಳು ಮೂತಿ ಮುಂದೆ ಬಂದಂತೆ ಇದೆ ಕೈಯ್ಯನ್ನು ಹಿಂದಕ್ಕೆ ಚಾಚಿದಳು ಹೌದು ಬಾಲವೂ ಇದೆ ಹಯ್ಯೋ, ಇದೇನನ್ಯಾಯ? ಎಲ್ಲಿ ನನ್ನ ಮಗನೆಲ್ಲಿ, ನನ್ನ ಪ್ರೀತಿಯ ಕಂದನೆಲ್ಲಿ! ಹಾಂ, ಎನ್ನುತ್ತಿದ್ದಂತೆಯೇ ಪ್ರಜ್ಞೆ ತಪ್ಪಿದಳು

ಮತ್ತೆ ಎಚ್ಚರವಾಗುವಷ್ಟು ಹೊತ್ತಿಗೆ ಬೆಳಕು ಎಲ್ಲೆಲ್ಲು ಹರಡಿತ್ತು ತನ್ನ ಮಗುವಿದ್ದ ಕಡೆ ನೋಡಿದಳು ಹೌದು, ಮಗುವು ರಾತ್ರಿ ಮಲಗಿಸಿದಾಗ ಹೇಗಿದೆಯೋ ಹಾಗೆಯೇ ಇದೆ ಯಾವ ವ್ಯತ್ಯಾಸವೂ ಇಲ್ಲ ಪ್ರಶಾಂತವಾಗಿ ಮಲಗಿದೆ ಹಾಗಿದ್ದರೆ ಮುಂಜಾನೆ ತಾನು ನೋಡಿದುದು? ತಾನು ನೋಡಿದುದು ರಾಮಭಕ್ತ ಹನುಮಂತನ ಕಿರುಮೂರ್ತಿಯನ್ನು ಆಕೆಗೆ ಎಲ್ಲವೂ ಅಯೋಮಯವಾಗಿ ಕಂಡುಬಂದಿತ್ತು ಏನನ್ನೂ ಅರ್ದಮಾಡಿಕೊಳ್ಳಲಾರದ ಸ್ಥಿತಿಯಲ್ಲಿದ್ದಳು

ಅಷ್ಟರಲ್ಲಿ ಬಾಲಕನಿಗೆ ಎಚ್ಚರವಾಗಿ, "ಏನಮ್ಮ ನನ್ನ ಹಾಗೆ ನೋಡ್ತಿದೀಯ?" ಎಂದು ಅವನು ಹೇಳಿದಾಗಲೇ ರಾಣುಬಾಯಿಯು ಈ ಪ್ರಪಂಚಕ್ಕೆ ಇಳಿದುದು

ಸ್ನಾನಪೂಜಾದಿಗಳ ನಂತರ ದೇವರ ಮನೆಯಲ್ಲಿ ಕುಳಿತು ಪ್ರಶಾಂತಳಾಗಿ ಅದುವರವಿಗೆ ನಡೆದುದೆಲ್ಲವನ್ನು ಮತ್ತೊಮ್ಮೆ ನೆನಪಿಸಿಕೊಂಡು, ಆ ಘಟನೆಗಳ ಬಗ್ಗೆ ಚಿಂತಿಸಿದಳು ಮನಸ್ಸಿಗೆ ಸಮಾಧಾನವಾಯಿತು -- ತನ್ನ ಮಗ ಶ್ರೀರಾಮರ ವರಪ್ರಸಾದದಿಂದ ಜನಿಸಿದವನು ಪ್ರಜೆಗಳ ಉದ್ಧಾರಕ್ಕಾಗಿ ಚಿರಂಜೀವಿಯಾಗಿರುವ ಆಂಜನೇಯನು ತನ್ನ ಮಗನ ರೂಪದಲ್ಲಿ ಕಾಣಿಸಿಕೊಂಡಿರುವನೆಂದು ತೀರ್ಮಾನಿಸಿಕೊಂಡಳು ಸಮಾಧಾನದ ನಿಟ್ಟುಸಿರುಬಿಟ್ಟಳು

ಅಂದಿನಿಂದ ಆಕೆಯು ತನ್ನ ಮಗನಿಗೆ ರಾಮಾಯಣದ ಕದೆಗಳನ್ನು ವಿವರಿಸತೊಡಗಿದಳು ಅದರಲ್ಲೂ ಆಂಜನೇಯನ ಪಾತ್ರದ ಬಾಗಗಳು ಬಂದಾಗಲಂತೂ ಮೈಮರೆತು ವರ್ಣಿಸುತ್ತಿದ್ದಳು ಬಾಲಕನು ಆಂಜನೇಯನ ಸಾಹಸಗಳನ್ನು ಬಿಟ್ಟ ಕಂಗಳು, ಬಿಟ್ಟ ಬಾಯಿಯಿಂದ ಆಲಿಸುತ್ತಿದ್ದನು ಬರುಬರುತ್ತಾ ಆ ಘಟನೆಗಳು ತನ್ನ ಜೀವನದ ಒಂದು ಭಾಗವೊ ಎನ್ನುವಂತೆ ಭಾಸವಾಗತೊಡಗಿದುವು ಆತನ ಸಾಹಸಗಳೆಂದರೆ ಎಷ್ಟು ಸಲ ಆಲಿಸಿದರೂ, ಆ ಬಾಲಕನಿಗೆ ತೃಪ್ತಿಯಿಲ್ಲ ಮತ್ತೆ ಮತ್ತೆ ಕೇಳಬೇಕೆನ್ನಿಸುತ್ತಿತ್ತು ರಾಣುಬಾಯಿಯೂ ಕೂಡ ಆ ಕದೆಗಳನ್ನು ಅನೇಕ ಸಲ ಹೇಳುತ್ತಿದ್ದಳು ಹೀಗಾಗಿ ಆ ಬಾಲಕನ ಮನಸ್ಸು ಹೃದಯಗಳಲ್ಲಿ ಮಾರುತಿಯ ಸಾಹಸ, ಭಕ್ತಿಗಳೇ ನೆಲೆ ನಿಂತವು.

ಒಮ್ಮೆ ಬಾಲಕ ರಾಮದಾಸನು ಸಮುದ್ರಲಂಘನ ಮಾಡಿ ಆಂಜನೇಯನು ಲಂಕೆಯನ್ನು ತಲುಪಿದ ಎಂಬುದನ್ನು ನೆನಪಿನಲ್ಲಿಟ್ಟುಕೊಂಡು, ಹೀಗೆ ಹಾರಿದ ಎಂದು ನದಿಯನ್ನು ಹಾರಲು ನೆಗೆದ ಆದರೆ ನದಿಯಲ್ಲಿ ಬಿದ್ದ ಬಾಲಕ ರಾಮದಾಸನ ತಲೆಯು ಅಲ್ಲಿದ್ದ ದೊಡ್ಡ ಬಂಡೆಯೊಂದಕ್ಕೆ ತಗುಲಿ, ಮೂರ್ಛೆ ಹೋಗಿ, ನೀರಿನಲ್ಲಿ ಬಿದ್ದ ಅಲ್ಲಿಯೇ ಬಟ್ಟೆ ಒಗೆಯುತ್ತಿದ್ದ ರಾಣುಬಾಯಿಯು ಮಗನ ಪರಿಸ್ಥಿತಿಯನ್ನು ಕಂಡು ಓಡಿ ಬಂದು, ಅವನನ್ನು ಎತ್ತಿಕೊಂಡು ಹೋಗಿ ಉಪಚರಿಸಿದಳು ಎಚ್ಚರವಾದಾಗ ತಾಯಿ ಅವನನ್ನು ಹಾಗೇಕೆ ಮಾಡಿದೆಯೆಂದು ಕೇಳಿದಳು ತಾನು ಲಂಕೆ ಸೇರಲು ಸಮುದ್ರಲಂಘನ ಮಾಡಿದೆ ಎಂದು ತಿಳಿಸಿದ ನಾರಾಯಣ (ರಾಮದಾಸ) ನಿಗೆ ಬುದ್ಧಿವಾದ ಹೇಳಿದಳು ಅವನ ಹಣೆಯಲ್ಲಿ ಇದರ ಪರಿಣಾಮವಾಗಿ ಎದ್ದಿದ್ದ ಬಾವನ್ನು ತೋರಿಸಿ, ಇನ್ನು ಮೇಲೆ ಹಾಗೆಲ್ಲ ಮಾಡಬಾರದೆಂದು ತಿಳಿಸಿದಳು ಹಣೆಯ ಮೇಲಿನ ಈ ಬಾವು ರಾಮದಾಸರ ಜೀವನ ಪರ್ಯಂತ ಉಳಿದುಬಿಟ್ಟಿತು

ಈ ಪ್ರಯತ್ನವು ರಾಮದಾಸನ ಸ್ಫೂರ್ತಿಗೆ ತಣ್ಣೀರು ಎರಚಿದಂತಾದರೂ, ಬೇರೆ ರೀತಿಯಲ್ಲಿ ರಾಣುಬಾಯಿಯು ತನ್ನ ಮಗನನ್ನು ಪ್ರೋತ್ಸಾಹಿಸತೊಡಗಿದಳು ಬಾರತೀಯತ್ವ ಹಾಗೂ ಹಿಂದೂತ್ವಗಳ ಬಗ್ಗೆ ಅನೇಕ ವಿಷಯಗಳನ್ನು ಬಾಲಕನಿಗೆ ತಿಳಿಯ ಹೇಳಿದಳು ತಾನೂರು ಮಾರುತಿಯಂತೆ ಕಾಡನ್ನು ತಲುಪಿ, ಅಲ್ಲಿನ ಮರಗಳ ತುದಿಯನ್ನು ಮುಟ್ಟಿ, ಆಕಾಶದಲ್ಲಿ ಹಾರುವುದಾಗಿ ತಿಳಿಸಿದ ಅಲ್ಲೆಲ್ಲ ಬೂತಪ್ರೇತಗಳೂ, ದುಷ್ಟ ಪ್ರಾಣಿಗಳೂ ಇರುವುದಾಗಿ ರಾಣುಬಾಯಿಯು ಮಗನಿಗೆ ತಿಳಿಸಿದಾಗ, ಅವುಗಳನ್ನೆಲ್ಲ ತನ್ನ ಮುಷ್ಟಿಯಿಂದ ಹೊಡೆದು ಓಡಿಸುವುದಾಗಿ ತಿಳಿಸುತ್ತಿದ್ದ ಹೀಗಾಗಿ ಆ ಬಾಲಕನಲ್ಲಿ ಬಯವೇ ಇಲ್ಲದಂತಾಯಿತು ಈ ನಿರ್ಭೀತಿಯು ರಾಮದಾಸರ ಜೀವನದ ಕಡೆಯವರೆಗೂ ಇದ್ದಿತು

ಐದು ವರ್ಷದ ನಾರಾಯಣನಿಗೆ ಪಿತೃವಿಯೋಗವಾಯಿತು ಆದರೆ ರಾಣುಬಾಯಿಯು ತನ್ನ ಈ ಪುಟ್ಟ ಮಗನಿಗಾಗಿ 'ಸತೀ' ಹೋಗಲಿಲ್ಲ ಬದಲಾಗಿ ಮಗನಿಗೆ ರಕ್ಷಕಳಾಗಿ ನಿಂತಳು

ಅಂತೆಯೇ ರಾಣುಬಾಯಿಯ ವಿದಾವಾ ಜೀವನವು ಪ್ರಾರಂಬವಾಯಿತು

ತಂದೆಯ ಸ್ಥಾನದಲ್ಲಿ ಈಗ ರಾಮದಾಸನ ಅಣ್ಣ ಗಂಗಾದರ ಇದ್ದ ಆದರೆ ಅವನ ಸಂಕುಚಿತ ಬಾವನೆಯು ರಾಣುಬಾಯಿಗೆ ಹಿಡಿಸಲಿಲ್ಲ ಬಾಗಿಲು ಮುಚ್ಚಿಕೊಂಡು ವೇದಪಾಠ ಹೇಳುವುದು ಇತ್ಯಾದಿಗಳನ್ನು ರಾಣುಬಾಯಿಯು ವಿರೋದಿಸಿದಳು ಅಂತೆಯೇ ರಾಮದಾಸನೂ ಕೂಡ-- ತಾನೂ ಆ ಚರ್ಚೆಗಳಲ್ಲಿ ಬಾಗವಹಿಸಬೇಕೆಂದು ಅವನಿಗೂ ಇಷ್ಟ, ಆದರೆ ಇದು ಸಾದ್ಯವಿರಲಿಲ್ಲ ಇದರ ಬಗ್ಗೆ ಅವನು ತನ್ನ ತಾಯಿಗೆ ದೂರಿದ ತಾನೂನು ದೀಕ್ಷೆ ಪಡೆಯಬೇಕೆಂದ ರಾಣುಬಾಯಿಗೆ ಯೋಚನೆಗಿಟ್ಟುಕೊಡಿತು ತನ್ನ ಊಹೆಗೂ ಮೀರಿ ಮಗನು ಮಾನಸಿಕವಾಗಿ ಬೆಳೆದಿರುವನಲ್ಲ ಎಂದುಕೊಂಡಳು

ತನಗೆ ದೇವರ ದ್ಯಾನದ ದೀಕ್ಷೆಯನ್ನು ಅಣ್ಣ ನಿರಾಕರಿಸಿದಾಗ ರಾಮದಾಸನು ತನ್ನ ಇಂಗಿತವನ್ನು ತಾಯಿಯಲ್ಲಿ ನಿವೇದಿಸಿಕೊಂಡ ಆಕೆಯು ದ್ರುವನ ಉದಾಹರಣೆ ನೀಡಿ, ಅವನೇ ನೇರವಾಗಿ ತನ್ನ ಆರಾದ್ಯದೈವವಾದ ಆಂಜನೇಯನನ್ನು ಸ್ತುತಿಸುವಂತೆ ಸೂಚಿಸಿದಳು

ಅಂತೆಯೇ ಬಾಲಕರಾಮದಾಸನು ಹತ್ತಿರದಲ್ಲಿನ ಆಂಜನೇಯನ ದೇವಾಲಯಕ್ಕೆ ಹೋಗಿ, ಅಲ್ಲಿ ನಿರಂತರವಾಗಿ ಆ ರಾಮಭಕ್ತನನ್ನು ಕುರಿತು ದ್ಯಾನಿಸತೊಡಗಿದ ಬೇರೆ ಯಾರಿಗೂ ಅವನ ಬಗ್ಗೆ ಚಿಂತೆ ಇಲ್ಲದಿದ್ದರೂ ಹೆತ್ತ ತಾಯಿಗೆ ಅವನ ಬಗ್ಗೆ ಚಿಂತೆ ಇತು ಅಂತೆಯೇ ಆಕೆಯು ದೇವಾಲಯದಲ್ಲಿ ಹೋಗಿ ನೋಡಿದಳು ಅಲ್ಲಿ ತದೇಕ ಚಿತ್ತದಿಂದ ದ್ಯಾನಿಸುತ್ತಿದ್ದ ಮಗನನ್ನು ನೋಡಿ, ಸಂತೋಷಗೊಂಡು ಹಿಂತಿರುಗಿದ್ದಳು

ಮೂರು ದಿನಗಳ ನಂತರ ಮನೆಗೆ ಹಿಂತಿರುಗಿ ಬಂದ ಮಗನನ್ನು ನೋಡಿ, ರಾಣುಬಾಯಿಯು ತುಂಬಾ ಸಂತೋಷಪಟ್ಟಳು ಅವನ ಮುಖದಲ್ಲಿ ಹೊಸ ತೇಜಸ್ಸು ಇತ್ತು ತಾಯಿಯು ಕೇಳುವುದಕ್ಕೆ ಮುಂಚೆಯೇ ತಾನೇ ಹೇಳಿದ,

"ಅಮ್ಮ! ಶ್ರೀರಾಮನು ನನ್ನ ಕನಸಿನಲ್ಲಿ ಕಾಣಿಸಿಕೊಂಡು ನನ್ನನ್ನು ತನ್ನ ಭಕ್ತನನ್ನಾಗಿ ಮಾಡಿಕೊಂಡ"

ತನ್ನ ಮಗನು ಶ್ರೀರಾಮನ ಭಕ್ತನಾದನಲ್ಲ ಎನ್ನುವ ಸಂತೋಷವಾದರೂ, ದಿನಕಳೆದಂತೆ ಆಕೆಯ ಯೋಚನೆ ಹೆಚ್ಚಾಯಿತು ಪ್ರಾಪಂಚಿಕ ಸಂಬಂದವಿಲ್ಲದವನಂತೆಯೇ ಅವನು ವರ್ತಿಸತೊಡಗಿದ ಇದನ್ನು ಗಮನಿಸಿದ ರಾಣುಬಾಯಿಯು ಮಗನ ಮದುವೆ ವ್ಯವಸ್ಥೆ ಮಾಡಿದಳು

ಇದು ತನ್ನನ್ನು ಸಂಸಾರ ಬಂದನಕ್ಕೆ ಸಿಲುಕಿಸುವುದೆಂದು ರಾಮದಾಸನಿಗೆ ಅರ್ಥವಾಗಿತ್ತು ಅಂತೆಯೇ ವಿಧಿಗಳೆಲ್ಲ ಮುಗಿದು, ದೀಕ್ಷೆ ಮುಗಿದ ಕೂಡಲೇ ಮದುವೆ ಮಂಟಪದಿಂದ ಈ ಸಾಮಾಜಿಕ ವ್ಯವಸ್ಥೆಯನ್ನೇ ತ್ಯಜಿಸಿ, ಗೃಹತ್ಯಾಗ ಮಾಡಿ ಹೊರಟುಹೋದ

ರಾಣುಬಾಯಿಗೆ ಇದು ತುಂಬಾ ಆಘಾತವನ್ನು ಉಂಟುಮಾಡಿತು ತಾನೊಂದು ನೆನೆದರೆ ದೈವವೊಂದು ಬಗೆಯಿತು ಎನ್ನುವಂತಾಯಿತು ಎಂದು ದುಃಖಿಸಿದಳು ತನ್ನ ಮೊದಲನೇ ಮಗನಿದ್ದರೂ ಆಕೆಗೆ ಈ ಮಗನದ್ದೇ ಚಿಂತೆಯಾಯಿತು

ದಿನಗಳು ತಿಂಗಳುಗಳಾಗಿ, ತಿಂಗಳುಗಳು ವರ್ಷಗಳಾಗತೊಡಗಿದುವು ತನ್ನ ಮಗ ಸಾಧನೆ




# ಗಮನಿಕೆ

ವಿವಿಧ ಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ

* ಸಪ್ತಗಿರಿಯನ್ನು ಕೋರುವವರು ಪ್ರತಿತಿಂಗಳಿನಲ್ಲಿ ೧೫ ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು, ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸ ಚಂದಾ' ಎಂದು ಬರೆಯಬೇಕು ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು

**ಸಂಪಾದಕರು**

ಸಪ್ತಗಿರಿ,

ಟಿ ಟಿ ಡಿ

ತಿರುಪತಿ -- ೫೧೭ ೫೦೧

ಯಲ್ಲಿ ತೊಡಗಿರುವನು ಎಂದುಕೊಂಡಳು ಆಕೆಗೆ ಮಗನ ಚಿಂತೆಯೇ ಹತ್ತಿತು ಹನ್ನೆರಡು ವರ್ಷಗಳು ಕಳೆದುವು. ಈ ಸಮಯದಲ್ಲಿ ರಾಣುಬಾಯಿಯು ತನ್ನ ಮಗನು ಉತ್ತಮ ಸಿದ್ಧಿಯನ್ನು ಪಡೆಯಲಿ, ಪ್ರಜೆಗಳಿಗೆ ಸದಾ ಒಳಿತನ್ನೇ ಮಾಡುವ ಸಮಾಜ ಸೇವಕನಾಗಲಿ ಎಂದೇ ದೇವರನ್ನು ಪ್ರಾರ್ಥಿಸುತ್ತಿದ್ದಳು ಅಂತೆಯೇ ಸಿದ್ಧಿಯನ್ನು ಪಡೆದು, ಆಂಜನೇ⁻ ದೇವಾಲಯಗಳನ್ನು ಸ್ಥಾಪಿಸಿ, ಬಾರತಾದ್ಯಂತ ಪ್ರವಾಸ ಮಾಡಿ ಅನೇಕ ಪವಾಡಗಳನ್ನು ಕೈಗೊಂಡ ವಿಚಾರಗಳು ರಾಣುಬಾಯಿಗೆ ಗೊತ್ತಾಗಿ ಅತ್ಯಂತ ಸಂತೋಷಗೊಂಡಳು ಆದರೆ ವೃದ್ಧಾಪ್ಯದ ಪರಿಣಾಮವಾಗಿ ಆಕೆಯ ಕಣ್ಣುಗಳು ಹೋದವು

ವಿವಿದ ಸ್ಥಳಗಳನ್ನು ನೋಡಿದ ನಂತರ ರಾಮದಾಸರು ಸಂತರಾಗಿ, ತಮ್ಮ ಸಾದನೆಗಳನ್ನು ರಾಷ್ಟ್ರಕ್ಕೆ ಅರ್ಪಿಸುವುದಕ್ಕೆ ಮುಂಚೆ ಅವರಿಗೆ ತಮ್ಮ ತಾಯಿಯ ಆಶೀರ್ವಾದವನ್ನು ಪಡೆಯಬೇಕು ಎಂದನ್ನಿಸಿತು ಅಂತೆಯೇ ಅವರು ತಮ್ಮ ಹುಟ್ಟೂರಾದ ಜಾಂಬ್‌ಗೆ ಬಂದರು ತಮ್ಮ ಮನೆಯ ಎದುರು ನಿಂತು "ಭವತಿ ಬಿಕ್ಷಾಂದೇಹಿ !" ಎಂದು ಕೂಗಿದರು

ಮಗನ ಆಗಮನವನ್ನು ತಾಯಿಯ ಹೃದಯ ಅರಿಯಿತು ಆಕೆಗೆ ಮಗನ ದನಿ ಗುರ್ತು ಸಿಕ್ಕಿತು ಅಂತೆಯೇ ಆತನಿಗಾಗಿ ಹೊರಗೆ ಬರುವುದರಲ್ಲಿದ್ದಳು ಅಷ್ಟರಲ್ಲಿ ರಾಮದಾಸರೇ ಮನೆಯನ್ನು ಪ್ರವೇಶಿಸಿದರು

ಆಕೆಗೆ ಎಲ್ಲ ವಿಚಾರಗಳೂ ತಿಳಿದಿದ್ದುದರಿಂದ ರಾಮದಾಸರು ಹೆಚ್ಚಿನ ವಿವರಣೆ ನೀಡಲಿಲ್ಲ ಮಾತೆಯು ತನ್ನ ಮಗನ ಮೈಯ್ಯನ್ನೆಲ್ಲ ತಡವಿದಳು ಹಣೆಯ ಮೇಲಿನ ಬಾಲ್ಯದಲ್ಲಿ ಉಂಟಾಗಿದ್ದ ಬಾವನ್ನು ಸವರಿದಳು ಆದರೆ ಇಷ್ಟೆತ್ತರ ಬೆಳೆದು ನಿಂತಿರುವ ಮಗನನ್ನು ನೋಡುವ ಸೌಬಾಗ್ಯ ತನಗಿಲ್ಲವಲ್ಲ ಎಂದು ಆಕೆ ಪರಿತಪಿಸಿದಳು

ತಾಯಿಯ ಬಾವನೆ ಮಗನಿಗೆ ತಿಳಿಯಿತು ಅಂತೆಯೇ ಆಕೆಯ ಕಂಗಳ ಮೇಲೆ ತಮ್ಮ ಕೈಯ್ಯನ್ನು ಸವರಿದರು ಆಶ್ಚರ್ಯ ಆಕೆಗೆ ಕಂಗಳು ಬಂದುವು ತಮ್ಮ ಮಗ ಈ ನಿಜ ಅರ್ದದ ಆಂಜನೇಯನೇ ಆಗಿರುವನೆಂದು ಆಕೆ ಸಂತೋಷಗೊಂಡಳು ಮಗನನ್ನು ಕಣ್ತುಂಬ ನೋಡಿದಳು

"ಮಗು ನಿನ್ನನ್ನು ನೋಡಬೇಕೆಂದೇ ನಾನು ಇಷ್ಟು ದಿನಗಳವರೆಗೆ ಪ್ರಾಣವನ್ನು ಬಿಗಿಹಿಡಿದುಕೊಂಡಿದ್ದೆ ನನ್ನ ಆಸೆ ನೆರವೇರಿತು ನನಗೆ ಈಗ ಈ ಜೀವದ ಮೇಲೆ ಆಸೆಯಿಲ್ಲ ಸಾಕಪ್ಪ ನನ್ನ ಜೀವ "

"ಅಮ್ಮ! ಇದುವರೆವಿಗೂ ದೇಶಸೇವೆ ಮಾಡಲು ನಾನು ನಿರ್ದರಿಸಿರಲಿಲ್ಲ ನನ್ನ ತಪಸ್ಸೆಲ್ಲವನ್ನೂ ನನ್ನ ತಾಯಿನಾಡಿಗೆ ಅರ್ಪಿಸಬೇಕೆಂದಿದ್ದೇನೆ ನನ್ನ ಈ ಕಾರ್ಯದಲ್ಲಿ ಸಹಾಯಕವಾಗಲು ನಿನ್ನ ಆಶೀರ್ವಾದವನ್ನು ಬೇಡುತ್ತಿದ್ದೇನೆ ದಯಮಾಡಿ ನೀಡು !"

ಎಂದರು ಬೇಡುವ ದನಿಯಲ್ಲಿ

"ಮಗು ! ನೀನು ಆಂಜನೇಯ ಸಂಭೂತನು ಓರ್ವರಾಜನನ್ನು ಈ ಕಾರ್ಯಕ್ಕಾಗಿ ಮುಂದೆ ಮಾಡಿಕೊಂಡು, ಈ ಭಾರತದಲ್ಲಿ ಹಿಂದೂತ್ವದ ರಕ್ಷಣೆ ಮಾಡು ! ನಿನ್ನ ಈ ಸತ್ಕಾರ್ಯಕ್ಕೆ ನನ್ನ ನನ್ನಂತಹ ಅನೇಕ ಮಾತೆಯರ ಆಶೀರ್ವಾದ ಸದಾ ಇರುತ್ತೆ !" ಎಂದು ಹೃದಯ ತುಂಬಿ ಆಶೀರ್ವದಿಸಿದಳು

ಕಾಯೇನ, ವಾಚಾ, ಮನಸಾ -- ರಾಮದಾಸರು ತಾಯಿಗೆ ವಂದಿಸಿದರು ತಾವು ಶಿವಾಜಿಯ ಮುಖಾಂತರ ಯಾವ ರೀತಿಯಲ್ಲಿ ಹಿಂದೂ ರಾಷ್ಟ್ರೀಯತೆಯನ್ನು ಸಾದಿಸುವರು ಎಂಬುದನ್ನು ವಿವರಿಸಿದರು ಅದನ್ನು ಸಾದಿಸದೆ ತಾವು ಈ ಲೋಕವನ್ನು ತ್ಯಜಿಸುವುದಿಲ್ಲವೆಂದು ಮಾತುಕೊಟ್ಟರು

ರಾಣುಬಾಯಿಗೆ ಇದನ್ನು ಆಲಿಸಿ ತುಂಬಾ ಸಂತೋಷವಾಯಿತು ಮಗನನ್ನೊಮ್ಮೆ ಕಣ್ಣು ತುಂಬಾ ನೋಡಿ, ಕೈಮುಗಿದು ಶ್ರೀರಾಮನನ್ನು ಪ್ರಾರ್ದಿಸಿದಳು

ಹಾಗೆಯೇ ಆಕೆಯ ಆತ್ಮ ಪರಮಾತ್ಮನಲ್ಲಿ ಲೀನವಾಯಿತು ರಾಮದಾಸರು ತಮ್ಮ ಕರ್ತವ್ಯವನ್ನು ಮುಗಿಸಿ, ವಿಶಾಲ ಪ್ರಪಂಚದಲ್ಲಿ ಕಾಲಿರಿಸಿದರು ತಾಯಿಗೆ ಕೊಟ್ಟ ಮಾತಿನಂತೆ ಬಾಲಕ ಶಿವಾಜಿಯನ್ನು ಕಂಡು ಆತನಲ್ಲಿ ಸ್ವರಾಜ್ಯ ಪ್ರೇಮದ ಬೀಜವನ್ನು ಬಿತ್ತಿದರು ತಾವೇ ಸ್ವತ ರಾಜ್ಯದಲ್ಲೆಲ್ಲ ಸಂಚರಿಸಿ, ಮಾರುತಿಯ ದೇವಾಲಯಗಳನ್ನು ಸ್ಥಾಪಿಸಿ, ಯುವಕರ ತಂಡಗಳನ್ನು ನಿರ್ಮಿಸಿದರು ಮಹಾರಾಷ್ಟ್ರಾದಂತ್ಯ ಈ ರೀತಿಯ ಬಜರಂಗ ಬಲಿ ತಂಡಗಳು ಅಸಂಖ್ಯಾಕವಾಗಿ ಬೆಳೆದು ಎಲ್ಲ ರೀತಿಗಳಲ್ಲೂ ಶಿವಾಜಿಗೆ ಬೆನ್ನೆಲುಬಾಗಿ ನಿಂತವು. ಹೀಗೆ ಹೆಜ್ಜೆ ಹೆಜ್ಜೆಗೂ ಮಾರ್ಗದರ್ಶನ ಸಮಾಚಾರವನ್ನು ಪಡೆದ ಕೂಡಲೇ ತಮ್ಮ ಜೀವಿತದ್ಯೇಯವು ಕೃತಿರೂಪ ಪಡೆಯಿತೆಂದು ಬಾವಿಸಿ, ಸಜ್ಜನಗಡದಲ್ಲಿ ರಾಮದಾಸರು ದೇಹತ್ಯಾಗ ಮಾಡಿದರು



# ಮಾಯೆ

'ಮಾಯೆ' ಎಂದರೆ ಈಶ್ವರನ ವಿಶ್ವಶಕ್ತಿ ಕರ್ಮ ದಲ್ಲಿ ವ್ಯಕ್ತವಾಗಿರುವ ಶಕ್ತಿಯೇ ಮಾಯೆ ಸುಪ್ತವಾಗಿರುವ ಶಕ್ತಿಯೇ ಬ್ರಹ್ಮ ಶಿವ, ಶಕ್ತಿಗಳಿಗೆ ಇರುವ ಸಂಬಂಧ ಬೆಂಕಿಗೂ ಅದಕ್ಕೆ ಇರುವ ದಹಿಸುವ ಗುಣಕ್ಕೂ ಇರುವ ಸಂಬಂದದಂತೆ ಇರ್ವರೂ ಸೃಷ್ಟಿಗೆ ಅವಶ್ಯಕ ಎಲ್ಲಿಯವರೆವಿಗೆ ಪರವಸ್ತುವನ್ನು ಮರೆಮಾಡುವ ಮಾಯಾಶಕ್ತಿ (ಅವಸ್ತು) ಆಚೆ ಸರಿಯುವುದಿಲ್ಲವೊ ಅಲ್ಲಿಯವರೆವಿಗೂ ಮಾನವನು ಶಿವನನ್ನು ದರ್ಶಿಸಲಾರ ಆಧ್ಯಾತ್ಮಿಕ ವಿಕಾಸವನ್ನು ತಡೆಯುವ ರತ್ನಾಸಕ್ತಿಯೆ ಮಾಯೆ

ದೇವರು ಸರ್ವಾಂತರ್ಯಾಮಿಯಾದರೆ ನಾವು ಅವನನ್ನು ಯಾತಕ್ಕೆ ನೋಡುವುದಿಲ್ಲ? ಪಾಚಿಯು ತುಂಬಿದ ಕೊಳದ ಸಮೀಪ ನಿಂತು ನೋಡಿದರೆ ಅಲ್ಲಿ ನೀರು ಕಾಣಿಸುವುದಿಲ್ಲ ನೀರನ್ನು ನೋಡಬೇಕೆಂದು ನಾವು ಬಯಸಿದರೆ ಕೊಳದ ಮೇಲಿನ ಪಾಚಿಯನ್ನು ತೆಗೆಯಬೇಕು ಮೋಹಕಾರಿಯಾದ ಮಾಯೆಯ ಸ್ವಭಾವವನ್ನು ತಿಳಿದರೆ ಭಗವಂತನ ದರ್ಶನ ಸಾದ್ಯ ಇದೇ ದೃಷ್ಟಿಯನ್ನು ಉಪನಿಷತ್ತು ಹೇಗೆ ಘೋಷಿಸಿದೆ --

ಹಿರಣ್ಮಯೇನ ಪಾತ್ರೇಣ
ಸತ್ಯಸ್ಯಾಪಿಹಿತಂ ಮುಖಮ್
ತತ್ತ್ವಂ ಪೂಷನ್ನ ಪಾವೃಣು
ಸತ್ಯದರ್ಮಾಯ ದೃಷ್ಟಯೇ

ಭಗವಂತನಲ್ಲಿ ವಿದ್ಯಾಮಾಯೆ ಮತ್ತು ಅವಿದ್ಯಾ ಮಾಯೆ ಎರಡು ಇವೆ ವಿದ್ಯಾಮಾಯೆ ಜೀವಿಯನ್ನು ನೇವರ ಕಡೆಗೆ ಕರೆದೊಯ್ಯುವುದು ಜ್ಞಾನ, ಭಕ್ತಿ, ವೈರಾಗ್ಯ ದಯೆ ಇವು ವಿದ್ಯಾಮಾಯೆಯ ಲಕ್ಷಣ

ಇವುಗಳ ಸಹಾಯದಿಂದ ಮಾತ್ರ ನಾವು ದೇವರನ್ನು ಪಡೆಯಬಹುದು ಮಾಯೆಯ ಮೂಲಕವೇ ಬ್ರಹ್ಮಸಾಕ್ಷಾತ್ಕಾರ ಬ್ರಹ್ಮದ ಅವ್ಯಕ್ತ ಸ್ವರೂಪವಾದ ಶಕ್ತಿಯನ್ನು ಅರಿತಲ್ಲದೆ ಬ್ರಹ್ಮಾನುಭವಕ್ಕೆ ಬೇರೆ ಮಾರ್ಗವಿಲ್ಲ ಮಾಯೆಯ ಅನುಗ್ರಹದಿಂದ ಮಾತ್ರ ಪರಮ ಜ್ಞಾನ ಮತ್ತು ಪರಮಾನಂದ ಹೊಂದಲು ಸಾದ್ಯ ಈಶಾವಾಸ್ಯೋಪನಿಷತ್ತಿನ ಮಂತ್ರವನ್ನು ಇಲ್ಲಿ ಸ್ಮರಿಸಬಹುದು --

ವಿದ್ಯಾಂ ಚಾ ವಿದ್ಯಾಂ ಚ
ಯಸ್ತದ್ವೇದೋ ಭಯಂ ಸಹ
ಅವಿದ್ಯಯಾ ಮೃತ್ಯುಂ ತೀರ್ತ್ವಾ
ವಿದ್ಯಯಾಽಮೃತಮಶ್ನುತೇ

ಯಾರು ವಿದ್ಯೆ ಮತ್ತು ಅವಿದ್ಯೆ ಇವೆರಡನ್ನು ಒಟ್ಟುಗೂಡಿಸಿ ಅರಿಯುತ್ತಾರೋ ಅವರು ಅವಿದ್ಯೆಯ ದ್ವಾರಾ ಮೃತ್ಯುವನ್ನು ದಾಟಿ ವಿದ್ಯೆಯ ದ್ವಾರಾ ಅಮೃತವನ್ನು ಪಡೆಯುತ್ತಾರೆ

ಮಹಲಿಂಗರಂಗ ಕವಿಯೂ 'ಮಾಯೆ' ಬಗ್ಗೆ ತಿಳಿಸಿರುವ ಕೆಲವು ಪದ್ಯದ ತುಣುಕುಗಳು ಮನನ ಯೋಗ್ಯವಾದುವು

ಬ್ರಹ್ಮವೆತ್ತಲೊ ಮಾಯೆಯೆತ್ತಲೊ
ಚರ್ಮ ದೃಷ್ಟಿಗೆ ಮಾಯೆ ತದ್ವವು
ನಿರ್ಮಲಾತ್ಮಜ್ಞಾನ ದೃಷ್ಟಿಗೆ ಮಿಥ್ಯೆ ನೋಡೆಂದ

ವಿಚಾರವಿಲ್ಲದ ದೃಷ್ಟಿಗೆ "ಮಾಯೆ" ನಿಜವಾದದ್ದು ಜ್ಞಾನ ಪಡೆದ ವಿಚಾರದೃಷ್ಟಿಗೆ 'ಸುಳ್ಳು' ಎಂಬುದು ತಾತ್ಪರ್ಯ

ದಾರು ದಂತಿ ವಿಕಾರ ದಂದದಿ
ತೋರಿತಲ್ಲದೆ ದಂತಿಯುಳಿದಾ
ದಾರುವನು ತಾ ಬೇರೆ ತೋರಿತೆ
ನಾಮರೂಪಗಳ

ಕಟ್ಟಿಗೆಯು ಆನೆಯ ಆಕಾರದ ಹಾಗೆ ತೋರಿತೇ ಹೊರತು ಆನೆಯ ಆಕಾರ 'ಕಟ್ಟಿಗೆ' ಯನ್ನು ಬಿಟ್ಟು ಬೇರೆ ಇಲ್ಲ ಹೀಗೆಯೇ ಮಾಯೆಯ ನಾಮರೂಪಗಳು

ಸೊನ್ನೆಯ ಸಂಬಂದದಿಂದ ಒಂದೆಂಬುದು ಅನಂತವಾಗುವಂತೆ, ಮಾಯೆಯ ಸಂಬಂದದಿಂದ ಬ್ರಹ್ಮವು ಅನಂತವಾಗುವುದೆಂದು, ಸೊನ್ನೆಯನ್ನು ತೆಗೆದರೆ ಒಂದೇ ಉಳಿಯುವಂತೆ ಮಾಯೆಯ ಸಂಬಂಧವನ್ನು ಬಿಟ್ಟರೆ ಬ್ರಹ್ಮವು ಅದ್ವೈತ, ಅಮೃತ ಸಿಂದು

ಸಂಸ್ಕೃತದ 'ಮಾ' ಎಂಬ ಮಾತಿಗೆ 'ಇಲ್ಲ' ಎಂದರ್ಥ ಹಾಗೇ 'ಯಾ' ಎಂಬ ಮಾತಿಗೆ 'ಯಾವಳೊಬ್ಬಳು' ಎಂದರ್ಥ 'ಮಾಯೆ' ಎಂಬ ಪದಕ್ಕೆ 'ಯಾವಳು ಇಲ್ಲವೊ ಅವಳೆಂದರ್ಥ' ಆದರೆ ಶ್ರುತಿ 'ಸರ್ವಂ ಖಲ್ವಿದಂ ಬ್ರಹ್ಮ' ಎಂದು ಸಾರಿದೆ

'ಮಾ' ಎನೆ ನಿಷೇದಾರ್ಥವಪ್ಪುದು
'ಯೇ' ಯೆನಲದಿಂತಾವಳೊಬ್ಬಳು
ಈ ಯೆರಡು ವರ್ಣವಲ್ಲಿ ಮಾಯೆಯದಿಲ್ಲಪೆಂದರ್ಥ
ಮಾಯೆಯೆಂಬೀ ಶಬ್ದ ತಾನೇ
ಮಾಯೆಯದು ಪುಸಿಯೆಂದು ನುಡಿಯಲು
ಮಾಯೆಗೆಂತು ಪ್ರತಿಷ್ಠೆ? ಸರ್ವವೂ ಬ್ರಹ್ಮಮಯವೆಂದ

- (ಅನುಭವಾಮೃತ ಗ್ರಂಥ)

ಮಾಯೆಗೆ, ಮೂಲ ಪ್ರಕೃತಿ, ವೈಷ್ಣವ ಮಾಯಿ, ಯೋಗಾನಿದ್ರಾದೇವಿ, ಕಾರ್ಯಕಾರಣಳು, ಭ್ರಾಂತಿ - ಭ್ರಮಾರೂಪಳು, ಆಶಾರೂಪಿಣಿ, ಅಹಂಕಾರಿ, ಹೀಗೆ ಅನೇಕ ಹೆಸರುಗಳುಂಟು

ಸ್ವಾಮಿ ಪುರುಷೋತ್ತಮಾನಂದರು ತಮ್ಮ 'ಚಿಂತನ ಮಂಥನ'ದಲ್ಲಿ ಮಾಯಾರಾಣಿಯ ಸಹಚರನನ್ನು ವಿವರಿಸಿರುವುದು ತುಂಬಾ ಸ್ವಾರಸ್ಯ ಪೂರ್ಣವಾಗಿದೆ

ಭಗವಂತನ ಹೆಸರು ಸತ್ಯನಾರಾಯಣ, ಅವನ ಪತ್ನಿಯ ಹೆಸರು ಸತ್ಯಭಾಮಾ, ಅವನ ಕೀರ್ತಿ ಸತ್ಯ ದರ್ಮ ಪರಾಕ್ರಮ, ಇಂತಹ ದಿವ್ಯಮಾತಾ ಪಿತೃಗಳ ಸಂತಾನರಾದ ನಮಗೆ ಸುಳ್ಳು ಹೇಳಲು ಕಲಿಸಿಕೊಟ್ಟ ಆ ಗುರು ಯಾರಿರಬಹುದಪ್ಪಾ?

ಎರಡು ಪ್ರಬಲ ಕಾರಣಗಳಿವೆ, ಒಂದು ಆಸೆ ಇನ್ನೊಂದು ಭಯ ಸುಳ್ಳನ್ನು ಸರಿಯಾಗಿ ಹೇಳಲು ಸಾದ್ಯವಾದರೆ ಅದು ಸತ್ಯಕ್ಕಿಂತಲೂ ಹೆಚ್ಚು ಸತ್ಯವಾಗಿ ಕಾಣುತ್ತದೆ ಸತ್ಯವನ್ನು ಸುಳ್ಳಾಗಿಸಿ ಸುಳ್ಳನ್ನು ಸತ್ಯವಾಗಿಸುವವರನ್ನು 'ಮಾಯಾ ರಾಣಿ'ಯ ಲೀಲಾ ಸಹಚರರೆನ್ನ ಬಹುದೇ?

"ಮಾಯಯಾಪಹೃತ ಜ್ಞಾನ" ಮಾಯೆಯು ಜನದ ತತ್ವಜ್ಞಾನ ಸಾಮರ್ಥ್ಯವನ್ನು ಅಪಹರಿಸಿದೆ ಎನ್ನುತ್ತದೆ ಗೀತೆ ಮಾಯೆಯೆಂಬುದು ಪ್ರಕೃತಿ ಕಾರ್ಯದಲ್ಲಿಯ ಒಂದು ತಂತ್ರ ವಿಶೇಷ ಅಸಂ

**ಮುತ್ತೇಗೆರೆ ಅನಂತು**





# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು

*ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ*

### ಆಲಯ ಕಾರ್ಯಕ್ರಮ.

| | |
|---|---|
| ಸುಪ್ರಭಾತ | ಬೆಳಗ್ಗೆ 5--00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ 5--30 ಗಂಟೆಗೆ |
| (ರೂ 6--00 ಶುಲ್ಕದಿಂದ ನಾಲ್ಕು ಮಂದಿಗೆ ಪ್ರವೇಶ) | |
| 1ನೇ ಗಂಟೆ | ಬೆಳಗ್ಗೆ 6--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 6--30 ಗಂಟೆಗೆ |
| ಶುದ್ಧಿ 2ನೇ ಗಂಟೆ | ಬೆಳಗ್ಗೆ 11--30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ 12--00 ಗಂಟೆಗೆ |
| 3ನೇ ಗಂಟೆ | ಸಂಜೆ 6--00 ಗಂಟೆಗೆ |
| ಸರ್ವದರ್ಶನ | ಸಂಜೆ 6--30 ಗಂಟೆಗೆ |
| ಶುದ್ಧಿ | ರಾತ್ರಿ 8--45 ಗಂಟೆಗೆ |
| ಏಕಾಂತ | ರಾತ್ರಿ 9--00 ಗಂಟೆಗೆ |

### ಶುಕ್ರವಾರಗಳಲ್ಲಿ

| | |
|---|---|
| ಅಭಿಷೇಕ | ಬೆಳಗ್ಗೆ 9--00 ಗಂಟೆಗೆ |
| (ರೂ 100/-- ಶುಲ್ಕದಿಂದ ಒಬ್ಬರಿಗೆ ಪ್ರವೇಶ) | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/--) | |
| ಎರಡನೇ ಗಂಟೆ | ಬೆಳಗ್ಗೆ 11--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 11--30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ 7--00 ಗಂಟೆಗೆ |
| (ಮುಕುರ ಮಂಟಪದಲ್ಲಿ, ಶುಲ್ಕ ರೂ 150/--) | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) | |
| 3ನೇ ಗಂಟೆ | ರಾತ್ರಿ 8--00 ಗಂಟೆಗೆ |
| ಸರ್ವದರ್ಶನ | ರಾತ್ರಿ 8--30 ಗಂಟೆಗೆ |
| ಶುದ್ಧಿ | ರಾತ್ರಿ 9--30 ಗಂಟೆಗೆ |
| ಏಕಾಂತಸೇವೆ | ರಾತ್ರಿ 9--45 ಗಂಟೆಗೆ |

**ಪೇಷ್ಕಾರ್.**

ಗತದಿಂದ ಫಲಿಸಿದ ಪ್ರಮಾದ ಮಾಯೆ ಸುಳ್ಳಲ್ಲ, ಅದು ದಿಟವೂ ಅಲ್ಲ ಒಂದು ವಸ್ತುವನ್ನು ಮತ್ತೊಂದು ವಸ್ತುವೆಂಬ ತಪ್ಪುತಿಳುವಳಿಕೆ ಉಂಟು ಮಾಡುವ ಸಂದರ್ಭ ವಿಶೇಷವೇ ಮಾಯೆ ಹಗ್ಗದ ತುಂಡು ಸರ್ಪ ಸ್ಮೃತಿ ಎಂಬ ಭ್ರಾಂತಿ ಉಂಟುಮಾಡಿದ ಹಾಗೆ

ತ್ರಿಭಿರ್ಗುಣಮಯೈರ್ಭಾವೈಸ್ತ್ರಿಭಿಃ
ಸರ್ವಮಿದಂ ಜಗತ್
ಮೋಹಿತಂ ನಾಭಿಜಾನಾತಿ
ಮಾಮೇಭ್ಯಃ ಪರಮವ್ಯಯಮ್
ದೈವೀಹ್ಯೇಷಾ ಗುಣಮಯೀ
ಮಮ ಮಾಯಾದುರತ್ಯಯಾ
ಮಾಮೇವಯೇ ಪ್ರಪದ್ಯಂತೇ
ಮಾಯಾ ಮೇತಾಂ ತರಂತಿ ತೇ

--ಭಗವದ್ಗೀತೆ

ಪ್ರಕೃತಿಯಲ್ಲಿ ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳು ಸಮಸ್ತಲೋಕಕ್ಕೂ ಮೋಹವನ್ನು ಕಲಿಸಿವೆ ಈ ಮೂರು ಗುಣಶಕ್ತಿಗಳಿಗೂ ಮೇಲ್ಪಟ್ಟದ್ದು ಬ್ರಹ್ಮವಸ್ತು ತ್ರಿಗುಣಾತ್ಮಕವಾದ ಮಾಯೆ ದೈವ ಪ್ರಭಾವವುಳ್ಳದ್ದು ಅದನ್ನು ಮೀರುವುದು ಕಷ್ಟ, ಆದುದರಿಂದ ಭಗವಂತನನ್ನೇ ಯಾರು ಆಶ್ರಯಿಸಿಕೊಂಡಿರುತ್ತಾರೋ ಅವರು ಮಾಯೆಯನ್ನು ದಾಟುತ್ತಾರೆ ಹಾಗೂ ಪರಮ ತತ್ವವನ್ನು ಕಾಣುತ್ತಾರೆ

ಮಾಯೆಯ ಗುಣಲಕ್ಷಣಗಳನ್ನು ತಿಳಿಸುವ ಕೀರ್ತನೆಯೊಂದನ್ನು ಅವಲೋಕಿಸೋಣ --

ಎತ್ತ ಹೋದರು ಸುತ್ತಲೆಲ್ಲೋ
ಅರಿಗಾರೂ ಇಲ್ಲ ಜಗದೊಳು
ಎಂಬುದನು ನೀ ನೆನಪಿಡು
ಮಾಯೆಯೊಡ್ಡಿದ ಬಲೆಯೊಳಿದ್ದರು
ತಾಯ ಪಾದದಿ ಮನವಿಡು

ಒಂದು ದಿನವೋ ಎರಡು ದಿನವೊ
"ಸ್ವಾಮಿ, ಬುದ್ಧೀ" ಎಂದು ಜನರು
ಗೌರವದಿ ಬಳಿ ಸುಳಿವರು
ಮೃತ್ಯು ಬಂದೆಳೆವಾಗ ನಿನ್ನನ್ನು
ಎಲ್ಲರೂ ಹಿಂದುಳಿವರು

--ವಚನವೇದ

ಮಾಯೆಯು ಎರಡು ವಿಧಗಳಲ್ಲಿ ಕೆಲಸಮಾಡುತ್ತದೆ

1 ವಿಕ್ಷೇಪ ಶಕ್ತಿ (ಒಂದು, ಇನ್ನೊಂದಾಗಿ ತೋರುವುದು)

2 ಆವರಣ ಶಕ್ತಿ (ನಿಜವನ್ನು ಬಚ್ಚಿಡುವುದು)

ಮಾಯೆಯಿಂದ ನಮ್ಮ ಜೀವಕ್ಕಾಗುವ ಪರಿಣಾಮ ಹಲವಾರು ಅವಿದ್ಯಾ ದೋಷವನ್ನು ತೋರುವ ಜಗಚ್ಚಕ್ತಿ, ಮಾಯೆ ಮೀರಿದ ಹೊರತು ಜಗದೀಶ್ವರ ಸಂಬಂಧದ ಯಥಾರ್ಥವಾಗಲಿ, ಜೀವೇಶ್ವರ ಸಂಬಂಧದ ಯಥಾರ್ಥವಾಗಲಿ ನಮಗೆ ದೊರಕಲಾರದು ಮಾಯೆ 'ತತ್ವಜ್ಞಾನ' ತಿಳಿಯಲು ಪ್ರತಿಬಂಧಕವಾದರೂ ಒಂದು ರೀತಿ ಸಹಕಾರಿ, ಅದಕ್ಕೆ ಅವಳಿಗೆ 'ಜಗನ್ಮಾಯೆ' ಎನ್ನುವರು

ಮಾಯೆ ಅಜ್ಞಾತವಾದುದು ಒಮ್ಮೆ ನಾರದನು ಪರಮೇಶ್ವರನನ್ನು ಕಂಡು "ಪ್ರಭು ಅಸಾಧ್ಯವಾದುದನ್ನು ಸಾಧ್ಯಮಾಡಬಲ್ಲ ನಿನ್ನ ಮಾಯಾಶಕ್ತಿಯನ್ನು ತೋರು" ಎಂಬುದಾಗಿ ಕೇಳಿಕೊಂಡನು ನಂತರ ನಾರದನಿಗೆ ಪರಮೇಶ್ವರ, "ನನಗೆ ಬಾಯಾರಿಕೆ, ಎಲ್ಲಿಂದಲಾದರೂ ಸ್ವಲ್ಪ ನೀರನ್ನು ತೆಗೆದುಕೊಂಡು ಬಾ" ಎಂದನು ನಾರದನು ನೀರನ್ನು ತರಲು ಹೊರಟನು ದೂರದಲ್ಲಿರುವ ನದಿಯ ಹತ್ತಿರ ಬಂದಾಗ ಸುಂದರವಾದ ಯುವತಿಯನ್ನು ಕಂಡು ಅವಳ ರೂಪಿಗೆ ಮಾರುಹೋದನು ಕೊನೆಗೆ ಅವಳನ್ನು ಮದುವೆಯಾಗಿ ಗೃಹಸ್ಥನಂತೆ ನೆಲೆಸಿದನು ಕಾಲಕ್ರಮದಲ್ಲಿ ಅವಳಿಂದ ಹಲವು ಮಕ್ಕಳಾದವು ಒಮ್ಮೆ ದೊಡ್ಡ ಉಪದ್ರವ ಬಂದಿತು ಪತ್ನಿ ಮಕ್ಕಳನ್ನು ನಾರದರು ಕರೆದುಕೊಂಡು ನದಿಯನ್ನು ದಾಟುವುದಕ್ಕೆ ಬಂದಾಗ ದೊಡ್ಡ ಪ್ರವಾಹ ಬಂತು ಮಕ್ಕಳು, ಪತ್ನಿ ಎಲ್ಲರೂ ಮುಳುಗಿಹೋದರು ಎಲ್ಲರನ್ನೂ ಕಳೆದುಕೊಂಡು ನಾರದನು ದುಃಖಾಕ್ರಾಂತನಾಗಿ ನದಿಯ ದಡದ ಮೇಲೆ ಕುಳಿತಿರುವಾಗ ಪರಮೇಶ್ವರನು ಬಂದು "ಹೇ ನಾರದ ನೀರೆಲ್ಲಿ? ನೀನು ಏತಕ್ಕೆ ಅಳುತ್ತಿರುವೆ" ಎಂದನು ದೇವರ ದರ್ಶನವಾದ ನಾರದನಿಗೆ ಜಾಗ್ರತೆಯುಂಟಾಗಿ "ಹೇ ದೇವ, ನಿನಗೆ ನಮಸ್ಕಾರ, ಅದ್ಭುತವಾದ ನಿನ್ನ ಮಾಯೆಗೂ ನಮಸ್ಕಾರ" ಎಂದನು ಮಾಯೆ ಬಗ್ಗೆ ಒಂದು ಸುಂದರ ಕೀರ್ತನೆ ಯೊಂದನ್ನು ನೆನಪು ಮಾಡಿಕೊಳ್ಳಬಹುದು

ನೀ ಮಾಯೆಯೊಳಗೋ
ನಿನ್ನೊಳು ಮಾಯೆಯೋ
ನೀ ದೇಹದೊಳಗೋ ನಿನ್ನೊಳು ದೇಹವೋ
ಜಿಹ್ವೆ ಮನಸಿನೊಳಗೋ
ಮನಸು ಜಿಹ್ವೆಯೊಳಗೋ
ಜಿಹ್ವೆ ಮನಸುಗಳೆರಡು ನಿನ್ನೊಳಗೋ ಹರಿಯೇ

ಅಸಮಭವಕಾಗಿ ನೆಲೆಯಾದಿ ಕೇಶವರಾಯ
ಉಸುರಲೆನ್ನಳವಲ್ಲ ಎಲ್ಲ ನಿನ್ನೊಳಗೋ
--ಕನಕದಾಸರು

ವಚನಕಾರರು 'ಮಾಯೆ' ಬಗ್ಗೆ ಹೇಳುವಾಗ ಹೊನ್ನು, ಹೆಣ್ಣು, ಮಣ್ಣು ಮಾಯೆ ಅಲ್ಲ, 'ಮನದ ಮುಂದಣದಾಸೆ ಮಾಯೆ' ಎಂದಿದ್ದಾರೆ

ದೇವರ ದಾಸಿಮಯ್ಯನವರು ತಮ್ಮದೊಂದು ವಚನದಲ್ಲಿ --

ವಿಷಯದ ಪಿತ್ತ ತಲೆಗೇರಿದಲ್ಲಿ ವಿವೇಕ
ವೆಂಬ ದೃಷ್ಟಿ ನಷ್ಟವಾಗಿ ಪಶುಪತಿಯ ನೆನಹು
ಕೆಟ್ಟು ಮತಿ ಮಂದವಾದಲ್ಲಿ
ಮಂತ್ರದ ನೆನಹುಂಟೆ ?

ಎಂದರೆ ಬಸವಣ್ಣನವರು ಮತ್ತೊಂದು ಬಗೆಯಲ್ಲಿ ತಿಳಿಸಿದ್ದಾರೆ --

ಜಗವ ಸುತ್ತಿರುವುದು ನಿನ್ನಯ ಮಾಯೆ
ನಿನ್ನ ಸುತ್ತಿರುವುದು ಎನ್ನಮನನೋಡಾ
ಕರಿಯು ಕನ್ನಡಿಯೊಳು ಅಡಗಿರುವಂತೆ
ನೀ ಎನ್ನೊಳಗೆ ಅಡಗಿದೆ
ಅಯ್ಯಾ ಕೂಡಲಸಂಗಮದೇವಾ

ಶ್ರೀ ಶಂಕರರ 'ಭಜಗೋವಿಂದ' ಸ್ತೋತ್ರದಲ್ಲಿ ಮಾಯೆ ಬಗ್ಗೆ ತಿಳಿಸಿ ಕೊಟ್ಟಿರುವ ರೀತಿ ಬೇರೆಯಾಗಿದೆ

ಕಸ್ತ್ವಂ ಕೋಹಂ ಕುತ ಆಯಾತಃ
ಕಾಮೇ ಜನನೀ ಕೋಮೇತಾತಃ
ಇತಿ ಸಂಭಾವಯ ಸರ್ವಮಸಾರಂ
ವಿಶ್ವಂ ತ್ಯಕ್ತ್ವಾ ಸ್ವಪ್ನ ವಿಚಾರಂ

ನೀ--ನಾನಾರೆಲ್ಲಿಂದೈತಂದಿಹೆವು
ಜನನೀ ಜನಕರದಾರೆನಗೆ?
ಎಂಬುದಯೋಚಿಸು ಕೈಬಿಡು ಕನಸಿನ
ಲೋಕವಿದಸಾರ ವೆಂದರಿತು

'ಮಾಯೆ' ಸರಸಿಯೇ ಸರಿ ಅವಳನ್ನು ಬಿಟ್ಟು ನಮ್ಮ ಜೀವಕಥೆ ನಡೆಯದು ಅಳತೆಗೆ ಸಿಗದ ಮಹಿಮೆ ಅವಳದು ಆದರೂ ಅವಳು ಬ್ರಹ್ಮನ ಛಾಯೆಮಾತ್ರ ಒಮ್ಮೊಮ್ಮೆ ಅತಿ ಪ್ರೀತಿ ತೋರಿ ನಮ್ಮನ್ನು ಪಾತಾಳಕ್ಕೆ ನೂಕುವಳು "ಪ್ರಿಯ ಪಾತನಿಯವಳು"

ಮಾಯೆಯ ಬಂಧನವನ್ನೇ ಬಂಧುರ ಮಾಡಿಕೊಳ್ಳುವ ವಿಧಾನವನ್ನು ಡಾ|| ಡಿ ವಿ ಗುಂಡಪ್ಪನವರು" ಮಂಕುತಿಮ್ಮನ ಕಗ್ಗದಲ್ಲಿ ಅರ್ಥಪೂರ್ಣವಾಗಿ ತಿಳಿಸಿ ಕೊಟ್ಟಿದ್ದಾರೆ

ಮಾರನಂ ದಂಡಿಸಿದರೆ ಗೌರಿಯಿಂ ಭಯವೇನು
ಚಾರುಸಹಕಾರಿಯವಳಿಂದು ಶಿವನೊಲಿದನ್
ಮೀರೆ ಮೋಹವನು ಸಂಸಾರದಲಿ
ಭಯವೇನು?
ದಾರಿ ಕೆಳೆಯು ನಿನಗೆ

ಎಂದರೆ ಮತ್ತೊಂದು ಕವನದಲ್ಲಿ 'ವಿಧಿರಾಯ' ನನ್ನು ಒಲಿಸಿಕೊಳ್ಳಬೇಕು ಎಂಬುವನ್ನು ಹೀಗೆ ವಿವರಿಸಿದ್ದಾರೆ

ಬದುಕೊಂದು ಕದನವೆಂದಂಜಿ
ಬಿಟ್ಟೋಡುವನು
ಬದಿಯ ಬಾಯಿಗೆ ಕವಳವಾಗದುಳಿಯುವನೆ?
ಎದೆಯನುಕ್ಕಾಗಿಸುತ
ಮತಿಗದೆಯ ಪಿಡಿದು ನೀ
ನೆಮರುನಿಲೆ ಬಿದಿಯೊಲಿವ ಮಂಕುತಿಮ್ಮ

ಪ್ರಪಂಚದಲ್ಲಿ ನಿರತನಾದವನಿಗೆ ಮುಕ್ತಿ ಇಲ್ಲ ತೀವ್ರ ವೈರಾಗ್ಯದಿಂದ ಯಾರು ಭಗವಂತನನ್ನು ಪಡೆಯುತ್ತಾರೋ ಅವರು ಮಾಯೆಯಿಂದ ಮುಕ್ತಿ 'ನಾನು ದೇವರ ಸೇವಕ' ಎಂದಾಗ ಅಹಂಕಾರದಿಂದಲೂ ಮುಕ್ತಿ ಈ ಸಂದರ್ಭದಲ್ಲಿ ದೃಷ್ಟಾಂತವೊಂದನ್ನು ಅವಲೋಕಿಸೋಣ-- ಹಿಂದೊಬ್ಬ ಯೋಗೀಶ್ವರನಿದ್ದನು ಆತನ ವಯಸ್ಸು ಮುಗಿದಿತ್ತು ಮೃತ್ಯು ದೇವತೆಯು ಆತನ ಪ್ರಾಣವನ್ನು ತೆಗೆದುಕೊಂಡು ಹೋಗಲು ಬಂದಳು ಆಗ ಯೋಗಿಯು ತನ್ನ ತಂತ್ರಕೌಶಲದಿಂದ ತನ್ನಂತೆ ರೂಪವಿರುವ ಅನೇಕ ವ್ಯಕ್ತಿಗಳನ್ನು ಸೃಷ್ಟಿಸಿದನು ಮಾಯಾದೇವಿ ಆ ರೂಪರಾಶಿಗಳನ್ನು ನೋಡಿ ನಿಜವಾದ ಯೋಗಿಯನ್ನು ಕಂಡು ಕೊಳ್ಳಲಾಗದೆ ಹೋದಳು ನಂತರ ಆಲೋಚಿಸಿ, ಕಡೆಗೆ ಒಂದು ಉಪಾಯವನ್ನು ಕಂಡುಕೊಂಡು ಯೋಗೀಶ್ವರನನ್ನು ಕುರಿತು "ಆಹಾ, ಏನು ನಿನ್ನ ಅದ್ಭುತಶಕ್ತಿ ಯೋಗೀಶ್ವರ .. ಆದರೆ ಒಂದೇ ಒಂದು ಲೋಪಮಾಡಿರುತ್ತೀಯೇ ಆಗ ಆತ "ನಾನೆಲ್ಲಿ ತಪ್ಪುಮಾಡಿರುವೆ ತೋರಿಸು?" ಎಂದಾಗ, ಆ ತಕ್ಷಣವೇ ಮಾಯಾದೇವಿ ಅವನ ಕೊರಳಿಗೆ ಪಾಶಹಾಕಿ "ಇದೇ ನಿನ್ನ ದೋಷ, ಅದು ನಿನ್ನ ಅಹಂಕಾರ" ಎಂದಳು ಇಂಥಹ ಮಹಾಮಾಯೆಗೆ ನಮನ ಹೇಳುವುದೊಂದೇ ಔಚಿತ್ಯಪೂರ್ಣವಾಗಿದೆ

ನಮಸ್ತೇಸ್ತು ಮಹಾ ಮಾಯೇ ಶ್ರೀ ಪೀಠೇ
ಸುರಪೂಜಿತೇ ಶಂಖ ಚಕ್ರ ಗದಾಹಸ್ತೇ
ಮಹಾಲಕ್ಷ್ಮಿ-- ನಮೋಸ್ತುತೇ



# ತಿರುಮಲೆ ತಿರುಪತಿ ದೇವಸ್ಥಾನಗಳು --- ತಿರುಪತಿ

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

"ಸ್ವಲ್ಪವೇ ಸಂಪದವನ್ನು ನೀಡಿರಿ, ದೈವಿಕ ಫಲವನ್ನು ಪಡೆಯಿರಿ"

ಶ್ರೀ ವೆಂಕಟೇಶ್ವರಸ್ವಾಮಿ ಸನ್ನಿಧಿಯಾದ ತಿರುಮಲೆ ಕಲಿಯುಗ ವೈಕುಂಠವಾಗಿದ್ದು, ದಿನವೂ ಸಹಸ್ರಾರು ಮಂದಿ ಯಾತ್ರಿಕರು ಸ್ವಾಮಿ ದರ್ಶನಕ್ಕಾಗಿ ಆಗಮಿಸುತ್ತಾರೆ ದಿನದಿನವೂ ಹೆಚ್ಚುತ್ತಿರುವ ಯಾತ್ರಿಕ ಸಂದಣಿಯ ವಸತಿ ಸೌಲಭ್ಯಗಳ ಏರ್ಪಾಡಿಗಾಗಿ ತಿ ತಿ ದೇ ಗಳು ಸುಸಜ್ಜಿತ ಅತಿಥಿಗೃಹಗಳನ್ನೂ, ಈಗಿರುವ ಕಾಟೇಜುಗಳ ಮೇಲೆ ಮೊದಲ ಅಂತಸ್ತು ಕೊಠಡಿಗಳನ್ನೂ, ಸಪ್ತಗಿರಿ ಸತ್ರಗಳ ಕೋಣೆಗಳನ್ನೂ ದಾನಯೋಜನೆಯಲ್ಲಿ ನಿರ್ಮಿಸುತ್ತಿದೆ ತಿರುಮಲೆಯಲ್ಲಿ ವರ್ಷಪೂರ್ತಿ ಸೇರುವ ಯಾತ್ರಿಕ ಸಂದೋಹದ ಸೇವೆಯಲ್ಲಿ ಪಾಲುಗೊಳ್ಳಲು ಭಕ್ತದಾನಿಗಳಿಗೆ ಇದೊಂದು ಸದವಕಾಶ

## 1 ಮೊದಲ ಅಂತಸ್ತು

ತಿರುಮಲೆಯ ಆಳ್ವಾರ್ ಟ್ಯಾಂಕ್, ಮಂಗಳಬಾವಿ, ಶಂಕುಮಿಟ್ಟ, ಶೇಷಾದ್ರಿನಗರ, ಅಂಜನಾದ್ರಿನಗರ, ಗರುಡಾದ್ರಿನಗರ ಕಾಟೇಜುಗಳಲ್ಲಿ -- (ಸಿ ಹಾಗೂ ಡಿ ಭಾಗಗಳು) (ನೆಲ ಅಂತಸ್ತಿನಲ್ಲಿರುವ ಎ ಹಾಗೂ ಬಿ ಬಾಗಗಳಲ್ಲಿ ಮೇಲೆ ) -- ೨೦೦ ಮೊದಲ ಅಂತಸ್ತು ಕಾಟೇಜುಗಳನ್ನು ನಿರ್ಮಿಸುವ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದ್ದು ಎ ಟಿ.ಸಿ., ಎಂ ಬಿ ಸಿ., ಎಸ್ ಎಂ.ಸಿ , ಎಸ್ ಎನ್.ಸಿ , ಗಳಲ್ಲಿ ನೂರು ಕಾಟೇಜುಗಳ ಮೊದಲ ಅಂತಸ್ತು ನಿರ್ಮಾಣ ಪೂರ್ತಿಯಾಗಿ, ದಾನಿಗಳಿಗೆ ನೀಡಲಾಗಿದೆ ಎ ಎನ್.ಸಿ., ಜಿ.ಎನ್ ಸಿ. ಗಳಲ್ಲಿನ ನೂರು ಮೊದಲ ಅಂತಸ್ತು ಕಾಟೇಜುಗಳು ನಿರ್ಮಾಣ ಪೂರ್ಣಗೊಳ್ಳುವ ಹಂತದಲ್ಲಿವೆ ಇವು ತಿರುಮಲೆಯ ಟಿ ಬಿ ಶಂಕು, ಚಕ್ರ, ನಾಮಗಳ ಬಳಿಯಿವೆ ನೆಲ ಅಂತಸ್ತಿನ ಎ ಹಾಗೂ ಬಿ ಕಾಟೇಜುಗಳು, ಮೇಲೆ ಸಿ ಹಾಗೂ ಡಿ ಕಾಟೇಜುಗಳು ಪ್ರತಿಯೊಂದೂ ಎರಡು ಕೋಣೆಗಳನ್ನು ಹೊಂದಿ (೯೭೨ ಚದರಡಿ ಹಾಗೂ ೧೧೧೨ ಚದರಡಿ) ಸ್ನಾನ ಶೌಚಗೃಹಗಳನ್ನೊಳಗೊಂಡಿರುತ್ತವೆ

ರೂ ೧.೫ ಲಕ್ಷ ರೂಗಳನ್ನು ನೀಡುವುದರಿಂದ ದಾನಿಯು ಒಂದು ಮೊದಲ ಅಂತಸ್ತಿನ ಕಾಟೇಜುಗಳನ್ನು ತಮ್ಮ (ತಮ್ಮ ಸಂಸ್ಥೆ, ಟ್ರಸ್ಟ್, ಕಂಪನಿ) ಹೆಸರಿನಲ್ಲಿ ದಾನ ಮಾಡಬಹುದು

## ರಾಮಬಗೀಚ ಅತಿಥಿ ಗೃಹಗಳು

ಪ್ರತಿಯೊಂದು ಅಂತಸ್ತಿನಲ್ಲೂ ೫೦ ಸೂಟ್‌ಗಳಂತೆ ಮೂರು ಅಂತಸ್ತುಗಳಲ್ಲಿ ಒಟ್ಟು ೧೫೦ ಸೂಟ್‌ಗಳಿರುವ ಮೂರು ಅತಿಥಿಗೃಹಗಳನ್ನು ನಿರ್ಮಿಸಲು ಯೋಜಿಸಲಾಗಿದ್ದು ಅತಿಥಿಗೃಹ ೧ ರಲ್ಲಿ ೧೦೮ ಸೂಟ್‌ಗಳನ್ನು ನಿರ್ಮಿಸಿ ದಾನಿಗಳಿಗೆ ನೀಡಲಾಗಿದೆ ಅತಿಥಿಗೃಹ ೨ ರಲ್ಲಿ ೧೫೦ ಸೂಟ್‌ಗಳನ್ನು ನಿರ್ಮಿಸಿ ೫೮ ಸೂಟ್‌ಗಳನ್ನು ದಾನಿಗಳಿಗೆ ನೀಡಲಾಗಿದೆ ಇಲ್ಲಿನ ಮಿಕ್ಕ ೯೨ ಸೂಟ್‌ಗಳೇ ಅಲ್ಲದೆ ಅತಿಥಿಗೃಹ -- ೩ ರಲ್ಲಿನ ೧೫೦ ಸೂಟ್‌ಗಳು ನಿರ್ಮಾಣದ ಕೊನೆಯ ಹಂತದಲ್ಲಿವೆ

ಈ ಮೂರು ಅತಿಥಿಗೃಹಗಳು ದೇವಾಲಯದ ಎದುರಿಗೆ ಅರ್ಧ ಫರ್ಲಾಂಗ್ ದೂರದಲ್ಲಿ ಬೇಡಿ ಆಂಜನೇಯಸ್ವಾಮಿ ದೇವಾಲಯದ ಹಿಂಬಾಗದಲ್ಲಿ ನೂತನ ಆಸ್ಥಾನ ಮಂಟಪದ ಪಕ್ಕದಲ್ಲಿವೆ ಪ್ರತಿ ಸೂಟ್‌ನ ಪ್ಲಿಂತ್ ಏರಿಯಾ ೪೪ ೫ ಚದರಮೀಟರ್ ಆಗಿದ್ದು (ಸ್ನಾನ ಶೌಚಗೃಹಗಳೊಡನೆ), ಸಾಮಾನ್ಯ ಅಂಗಳವಿದೆ

ರೂ ೬೦,೦೦೦ ಮೊತ್ತದ ದಾನದಿಂದ ಒಂದು ಸೂಟ್ ಅನ್ನು ದಾನಿಗಳು ತಮ್ಮ ತಮ್ಮ ಹೆಸರಿನಲ್ಲಿ ನೀಡಬಹುದು

## ೩. ಸಪ್ತಗಿರಿ ಸತ್ರಗಳು :

ಒಂದು ಕೇಂದ್ರ ವಿಬಾಗದ ಸುತ್ತ ೯ ವಿಬಾಗಗಳಿರುವಂತಹ ಒಂದು ಮಹತ್ ಯೋಜನೆಯನ್ನು ತಿ ತಿ ದೇ ಆರಂಭಿಸಿದೆ ೧ ಹಾಗೂ ೯ ನೇ ವಿಬಾಗಗಳು ಪ್ರವೇಶ ಹಾಗೂ ಉಪಹಾರಗೃಹಗಳಿಗಾಗಿ ಕೇಂದ್ರ ವಿಭಾಗವು ಅಷ್ಟ ಮುಖಗಳ ಅಂಗಳವನ್ನು ಹೊಂದಿದ್ದು ಎಂಟು ಮುಖಗಳಲ್ಲೂ ಒಂದೊಂದು ವಿಬಾಗ ನಿರ್ಮಾಣವಾಗುವುದು ಯಾವುದೇ ವಿಭಾಗಕ್ಕೂ ೧ನೇ ವಿಭಾಗದಿಂದ ಪ್ರವೇಶ ಮಿಕ್ಕ ವಿಭಾಗಗಳು -- ೨ ರಿಂದ ೮ (ಒಟ್ಟು ೭ ವಿಬಾಗ)-- ೯೫೪ ಕೋಣೆಗಳನ್ನು ಹೊಂದಿದ್ದು ೧೧ ಕೋಣೆಗಳು ಆಡಳಿತ ನಿರ್ವಹಣೆಗಾಗಿದ್ದು ಮಿಕ್ಕ ೯೪೩ ಕೋಣೆಗಳನ್ನು ಯಾರಿಕರಿಗೆ ನೀಡಲಾಗುವುದು ಮೊದಲ ಹಂತದಲ್ಲಿ ೨ ಹಾಗೂ ೩ನೇ ವಿಭಾಗಗಳ (೧೦೮ + ೧೪೯) ೨೫೭ ಕೋಣೆಗಳ ನಿರ್ಮಾಣವನ್ನು ಕೈಗೆತ್ತಿಕೊಂಡು ಪೂರ್ಣಗೊಳಿಸುವ ಹಂತದಲ್ಲಿದೆ ಪ್ರತಿ ಕೋಣೆಯ ವಿಸ್ತೀರ್ಣ (ಸ್ನಾನ ಶೌಚಗಳೊಂದಿಗೆ) ೧೨'+೧೪' ರೂ ೪೦,೦೦೦ ಗಳ ದಾನದಿಂದ ದಾನಿಯು ತಮ್ಮ ಹೆಸರಿನಲ್ಲಿ ಕೋಣೆಯನ್ನು ನೀಡಬಹುದು ಈ ವರೆಗೆ ೮೦ ಕೋಣೆಗಳಿಗಾಗಿ ಆಂಶಿಕ ಹಾಗೂ ಪೂರ್ಣ ದಾನಗಳನ್ನು ಸ್ವೀಕರಿಸಲಾಗಿದೆ ಎರಡನೇ ವಿಭಾಗದ ಶೀಘ್ರ ಪೂರ್ಣತೆಯ ಬಳಿಕ ಅದನ್ನು ನೀಡಲಾಗುವುದು

## ೪ ಶೇಷಾದ್ರಿನಗರ ಅತಿಥಿಗೃಹ2 :

ಎರಡಂತಸ್ತಿನ ಈ ಅತಿಥಿಗೃಹದಲ್ಲಿ ೨೬ ಸೂಟ್‌ಗಳಿದ್ದು (ಪ್ರತಿ ಅಂತಸ್ತಿಗೆ ೧೩ ಸೂಟ್‌ಗಳು) ಯಾತ್ರಿಕರಿಗೆ ಬಾಡಿಗೆಯ ಮೇಲೆ ನೀಡಲಾಗುತ್ತದೆ ಪ್ರತಿ ಸೂಟ್ ೪.೨ ಮೀ X ೪.೨ ಮೀ ಇರುತ್ತದೆ

ಇಡೀ ಅತಿಥಿಗೃಹಕ್ಕಾಗಿ ಅಥವಾ ಪ್ರತಿ ಅಂತಸ್ತಿಗಾಗಿ ದಾನಗಳಿಗೆ ಆದ್ಯತೆ ನೀಡಲಾಗುವುದು

೨೫ ಲಕ್ಷ ರೂಗಳ ದಾನದಿಂದ ವ್ಯಕ್ತಿ, ವ್ಯಕ್ತಿಗಳು ಸಂಸ್ಥೆ, ಕಂಪನಿ, ಟ್ರಸ್ಟ್ ಇಡೀ ಅತಿಥಿಗೃಹದ ದಾನಿಗಳಾಗಲು ಸಾಧ್ಯ

ದಾನಿಗಳಿಗೆ ಸೌಲಭ್ಯಗಳು --- ದಾನಿಗಳು ತಮ್ಮ ಜೀವನಾವಧಿಯಲ್ಲೂ, ಕಂಪನಿ, ಇತ್ಯಾದಿಗಳು ೧೫ ವರ್ಷಗಳೂ ವರ್ಷಕ್ಕೆ ೬೦ ದಿನ (ಒಮ್ಮೆ ೧೦ ದಿನಗಳಿಗೆ ಮೀರದಂತೆ) ತಮ್ಮ ದಾನದ ಕಾಟೇಜು, ಸೂಟು, ಕೋಣೆಗಳಲ್ಲಿ ನಾಮಮಾತ್ರಸೇವಾ ಶುಲ್ಕದಿಂದ ಇರಬಹುದು ದಾನಿಗಳ ಹೆಸರು ವಿಳಾಸಗಳನ್ನು ಶಿಲಾಫಲಕದಲ್ಲಿ ಕೆತ್ತಿಸಿ ದಾನದ ಕೊಠಡಿ, ಸೂಟ್‌ಗಳಲ್ಲಿ ಪ್ರದರ್ಶಿಸಲಾಗಿರುವುದು

ಮಿಕ್ಕ ವಿವರಗಳಿಗಾಗಿ ಕೂಡಲೇ ಬರೆಯಿರಿ **ಕಾರ್ಯನಿರ್ವಹಣಾಧಿಕಾರಿ**, ತಿ ತಿ ದೇ ತಿರುಪತಿ

# ರಾಧಿಕಾ ಆರಾಧಿಕಾ

--ಕಂದಾಡೈ ಕೇಶವನ್.

ರಾಧಾ ಮಾಧವರ ಪ್ರಣಯ ವಿಹಾರಗಳೂ ವಿರಹಗೀತೆಗಳೂ ಭಕ್ತರಿಗೆ ಅಮಿತ ಆನಂದವನ್ನೀಯುತ್ತವೆ. ವಿಷ್ಣುವಿನ ಅವತಾರ ವಿಶೇಷಗಳನ್ನು ಬಣ್ಣಿಸುವ ಭಾಗವತ, ಹರಿವಂಶ, ವಿಷ್ಣುಪುರಾಣ, ವರಾಹಪುರಾಣಗಳಲ್ಲಿ ರಾಧೆಯ ಉಲ್ಲೇಖನವಿಲ್ಲ. ಬ್ರಹ್ಮವೈವರ್ತಪುರಾಣ, ಪದ್ಮಪುರಾಣ, ದೇವೀಭಾಗವತ ಹಾಗೂ ಗರ್ಗಸಂಹಿತೆಯಲ್ಲಿ ರಾಧೆಯ ವಿಚಾರಗಳು ಇವೆ.

ಜಯದೇವನ ಗೀತಗೋವಿಂದ ಮತ್ತು ಲೀಲಾಶುಕರ ಕೃಷ್ಣಕರ್ಣಾಮೃತ ಹಾಗೂ ನಟೇಶ ಪ್ರಭುವರ ರಾಧಾ ಸುಧಾನಿಧಿ, ರಾಧಾ ಮಾಧವರ ಸಂಬಂಧವನ್ನು ಕುರಿತು ಹಾಡಿದ ಶ್ರೇಷ್ಠ ಕಾವ್ಯಕೃತಿಗಳು. ಉತ್ತರ ಇಂಡಿಯಾದಲ್ಲಿ ಚೈತನ್ಯಪ್ರಭು ಹಾಗೂ ಕೃಷ್ಣಪಂಥೀಯವರು ರಾಧಾಮಾಧವರ ಚರಿತೆಯನ್ನು ಬಹುಮಟ್ಟಿಗೆ ಪ್ರಚಾರಮಾಡಿದರು. ಬ್ರಹ್ಮವೈವರ್ತಪುರಾಣದ ಕೃಷ್ಣ ಜನ್ಮಕಾಂಡದಲ್ಲಿ ರಾಧಾಕೃಷ್ಣರ ಚರಿತ್ರೆ ವರ್ಣಿತವಾಗಿದೆ. ರಾಧಾಕೃಷ್ಣರ ಉಪಾಸನಾ ಪದ್ಧತಿಯು ಯಾವಾಗ ಪ್ರಾರಂಭವಾಯಿತೋ ತಿಳಿಸುವುದು ಕಷ್ಟ. "ಶಿಲ ಪ್ಪದಿಕಾರಂ" ಎಂಬುವ ಪುರಾತನ ತಮಿಳು ಗ್ರಂಥವೊಂದರಲ್ಲಿ ಬರುವ ಕೃಷ್ಣನ ಹೆಂಡತಿ "ನಪ್ಪಿನ್ನೈ"ಳ ಪಾತ್ರ ರಾಧೆಯ ಪಾತ್ರವನ್ನೇಳುತ್ತದೆ ಎಂಬುದು ವಿದ್ವಾಂಸರ ಅಭಿಪ್ರಾಯ. ಸುಮಾರು ಎರಡನೆಯ ಶತಮಾನದಲ್ಲಿ ರಚಿಸಲಾಯಿತೆಂದು ಹೇಳಲಾಗಿರುವ ಹಾಲನ ಗಾಥಾಸಪ್ತಶತಿಯಲ್ಲಿಯೂ ನಾವು ರಾಧೆಯ ಹೆಸರನ್ನು ಕೇಳಬಹುದು. ಸುಮಾರು ಎಂಟನೆಯ ಶತಮಾನದಿಂದೀಚೆಗೆ ಅನೇಕ ಪ್ರಾಕೃತ ಕವಿಗಳು ತಮ್ಮ ಗ್ರಂಥಗಳಲ್ಲಿ ರಾಧೆಯ ಹೆಸರನ್ನು ಬಳಸಿರುವುದರಿಂದ ಅದಕ್ಕೂ ಮುಂಚೆಯೇ ರಾಧಾಕೃಷ್ಣರ ಉಪಾಸನಾ ಪದ್ಧತಿ ರೂಢಿಯಲ್ಲಿರಬೇಕು. ಸಂಸ್ಕೃತ ಕಾವ್ಯ ಪ್ರಪಂಚದಲ್ಲಿ ಮಾಳವದ ವಾಕ್ಪತಿ ಮುಂಜನ ಮೂರು ಶಾಸನಗಳಲ್ಲಿನ ಪ್ರಾರ್ಥನಾ ಶ್ಲೋಕಗಳಲ್ಲಿ ಮೊದಲನೆಯಬಾರಿಗೆ ರಾಧೆಯು ಕಾಣಿಸಿಕೊಂಡರೂ, ಲಕ್ಷ್ಮಣಸೇನನ ಆಸ್ಥಾನಕವಿಯಾಗಿದ್ದ ಜಯದೇವನೂ, ಕವಿಲೀಲಾಶುಕರೂ ತಮ್ಮ ಕಾವ್ಯಗಳಿಗೆ ರಾಧೆಯನ್ನೇ ನಾಯಕಿಯನ್ನಾಗಿ ಆರಿಸಿಕೊಂಡು ಅವಳನ್ನು ರಾಸೇಶ್ವರಿಯಾಗಿ ರೂಪಿಸಿದಾಗಲೇ ರಾಧಯು ಅಖಿಲ ಭಾರತದಲ್ಲಿ ಆರಾಧ್ಯದೇವತೆಯಾದಳು ಎಂದು ನಾವು ಊಹಿಸಬಹುದು.

ಈ ಮಹಾಕಾವ್ಯಗಳ ಮೂಲಕ ಒಂದೆರಡು ಶತಮಾನಗಳಲ್ಲಿಯೇ ರಾಧೆಯ ಪಾತ್ರ ಜನಪ್ರಿಯವಾಯಿತು. ನಂತರ ಮತೀಯ ವಲಯದಲ್ಲಿಯೂ ಆಕೆಯ ಪ್ರಭಾವ ಹೆಚ್ಚಾಯಿತು. ವಂಗದೇಶದ ಚಂಡೀದಾಸ, ಮಿದಿಲೆಯ ವಿದ್ಯಾಪತಿ -- ಇವರುಗಳೂ ತಮ್ಮ ಕವಿತೆಗಳಿಂದ ರಾಧೆಯನ್ನು ಜನಪ್ರಿಯಳನ್ನಾಗಿ ಮಾಡಿದರು. ಚೈತನ್ಯ ಮಹಾಪ್ರಭುವಿನಂತೆಯೇ ರಾಧಾಪಂಥಿಗಳೂ ವಿಷ್ಣುಗೋಸ್ವಾಮಿಗಳು, ನಿಂಬಾರ್ಕ ಪಂಥದವರೂ ರಾಧೆಯನ್ನು ದೇವತೆಯೆಂದೇ ಭಾವಿಸಿ ಪೂಜಿಸುತ್ತಿದ್ದಾರೆ. ಈ ಬಗ್ಗೆ ವಾದವಿವಾದಗಳೇನೇ ಇರಲಿ ರಾಧೆಯಿಲ್ಲದೆ ಕೃಷ್ಣನನ್ನು ಊಹಿಸುವುದೂ ಅಸಾಧ್ಯವಾಗಿದೆಯೆಂದರೆ ಅದು ಅತಿಶಯೋಕ್ತಿಯಲ್ಲ. ಭಾಗವತದಲ್ಲಿ ರಾಧೆಯ ಉಲ್ಲೇಖನವಿಲ್ಲದಿದ್ದ ಮಾತ್ರಕ್ಕೆ ರಾಧೆಯು ಕೃಷ್ಣನ ಆರಾಧ್ಯದೇವತೆ ಎಂಬುವುದನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಭಾಗವತದ ದಶಮಸ್ಕಂದದ ರಾಸಪಂಚಾಧ್ಯಾಯಿಯು ರಾಸಲೀಲೆಯನ್ನು ವರ್ಣಿಸುವಾಗ--

"ಅನಯಾऽऽರಾಧಿತೋ ನೂನಂ
ಭಗವಾನ್ ಹರಿರೀಶ್ವರಃ
ಯನ್ನೋ ವಿಹಾಯ ಗೋವಿಂದಃ
ಪ್ರೀತೋ ಯಾಮನಯದ್ ರಹः"

ಈಕೆಯು ಪ್ರಾಯಶಃ ಭಗವಾನ್ ಶ್ರೀಹರಿಯನ್ನು ಬಹುವಾಗಿ ಪೂಜಿಸಿರಬೇಕು.



ಏಕೆಂದರೆ ಗೋವಿಂದನು ನಮ್ಮೆಲ್ಲರನ್ನೂ ಬಿಟ್ಟು ಇವಳನ್ನು ಮಾತ್ರ ಪ್ರೀತಿಯಿಂದ ಏಕಾಂತದಲ್ಲಿ ಕರೆದೊಯ್ದಿದ್ದಾನೆ – ಎಂಬುವುದಾಗಿ ವ್ಯಾಸರು ಒಬ್ಬಳನ್ನು ಪ್ರಶಂಸಿಸಿದ್ದಾರೆ ಆಕೆಯೇ ಏಕೆ ರಾಧೆಯಾಗಿರಬಾರದೆಂದು ರಾಧೆಯ ಭಕ್ತರ ಅಭಿಪ್ರಾಯ ವ್ಯಾಸರು ಶ್ರೀ ಶುಕನಿಗೆ ಭಾಗವತದಲ್ಲಿ ರಾಧೆಯ ಮಹಿಮೆ ಏಕೆ ಹೇಳಲಿಲ್ಲ ಎಂಬುವುದಕ್ಕೆ ಪದ್ಮಪುರಾಣದಲ್ಲಿ "ಅತಿಗೋಪ್ಯಂ ತ್ವಯಾ ಪೃಷ್ಟಂ ಯನ್ಮಯಾನ ಶುಕಂ... ಗದಿತಂ ಎಂಬ ಶ್ಲೋಕದಲ್ಲಿ ರಾಧಾತತ್ವವು ಅತಿಗೋಪ್ಯವಾದುದು ಅದನ್ನು ತಾನು ತನ್ನ ಮಗನಿಗೂ ತಿಳಿಸಿಲ್ಲವೆಂದು ಹೇಳುತ್ತಾರೆ ವ್ಯಾಸರು ಕಾರಣ ರಾಧಾ ನಾಮ ಉಚ್ಚಾರಣೆಯಿಂದ ಆರುತಿಂಗಳು ಕಾಲ ಮೂರ್ಛೆ ಬರುವಂತಿದ್ದರಿಂದ ಶುಕನು ರಾಧೆಯ ಹೆಸರನ್ನು ಪರೀಕ್ಷಿತ್ತುವಿಗೆ ತಿಳಿಸಲಿಲ್ಲ "ಶ್ರೀ ರಾಧಾ ನಾಮಮಾತ್ರೇಣ ಮೂರ್ಛಾ ಷಾಣ್ಮಾಸಿಕೀ ಭವೇತ್ ನೋಚ್ಚಾರಿತ ಮತಃ ಸ್ಪಷ್ಟಂ ಪರೀಕ್ಷಿದ್ಧಿತ ಕೃನ್ಮುನಿಃ" ಎಂಬುವ ಆಧಾರದಿಂದ ಶ್ರೀ ಮದ್ಭಾಗವತದಲ್ಲಿ ಶ್ರೀ ರಾಧೆಯ ಹೆಸರೇಕೆ ಯಾವ ಗೋಪಿಯ ಹೆಸರೂ ಕೂಡ ಬಂದಿಲ್ಲ ಈ ವಿಷಯವನ್ನು ಶ್ರೀ ಸನಾತನ ಗೋಸ್ವಾಮಿಯವರು ತಮ್ಮ ಭಾಗವತಾಮೃತದಲ್ಲಿ ಪ್ರಥಮಖಂಡ ಏಳನೆಯ ಅಧ್ಯಾಯದಲ್ಲಿ ಶ್ಲೋಕದಲ್ಲಿ ಹೇಳಿದ್ದಾರೆ --

ಗೋಪೀನಾಂ ವಿತತಾದ್ಭುತ<br>
ಸ್ಫುಟತರ ಪ್ರೇಮಾನಲಾರ್ಚಿಚ್ಛಟಾ<br>
ದಗ್ಧಾನಾಂ ಕಿಲ ನಾಮ ಕೀರ್ತನ<br>
ಕೃತಾತ್ತಾಸಾಂ ವಿಶೇಷಾತ್‌ಸ್ಮೃತೇಃ<br>
ತತ್ತೀಕ್ಷ್ಣೋಜ್ವಲನ ಚ್ಛಿಖಾಗ್ರಕಣಿಕಾ<br>
ಸ್ಪರ್ಶೇನ ಸದ್ಯೋಮಹಾ<br>
ವೈಕಲ್ಯಂ ನ ಭಜತ್ ಕದಾಽಪಿ<br>
ಸಮುಖೇ ನಾಮಾನಿ ಕರ್ತುಂ ಪ್ರಭುಃ

ಗೋಪಿಯರಿಗೆ ಶ್ರೀಕೃಷ್ಣನಲ್ಲಿ ಅಪಾರ ಪ್ರೇಮ ಆ ಪ್ರೇಮಕ್ಕೆ ವಿಪ್ರಲಂಭ ವಿಯೋಗವು ಪ್ರಧಾನ ಅಂಗ. ಗೋಪಿಯರು ಶ್ರೀಕೃಷ್ಣ ವಿಯೋಗಾಗ್ನಿ ಜ್ವಾಲಾದಗ್ಧ ಹೃದಯರು ಆ ಕೃಷ್ಣನ ವಿಯೋಗದ ಸಂತಾಪದ ದಳ್ಳುರಿಯಲ್ಲಿ ದಹಿಸಿ ಬೆಂದು ಬಸವಳಿದ ಗೋಪಿಯರ ಚಿತ್ರ ಶ್ರೀ ಶುಕಮಹರ್ಷಿ ಮನದಲ್ಲಿ ಮೂಡಿಬಂದು ಗೋಪಿಯರ ಅತ್ಯಂತ ದುಃಖವನ್ನು (ವಿರಹವನ್ನು) ತಾವೂ ಅನುಭವಿಸಿ ಮೂರ್ಛಿತರಾಗುವ ಸಂಭವವಿದ್ದರಿಂದ ತಮ್ಮ ಧ್ಯಾನಾವಸ್ಥೆಕ್ಕೆ ಭಂಗ ಬಂದೀತೆಂಬ ಭಾವದಿಂದ ಶ್ರೀ ಶುಕಮಹರ್ಷಿಗಳು ಯಾವ ಗೋಪಿಯ ಹೆಸರನ್ನೂ ಸ್ಮರಿಸಲಿಲ್ಲ ಗೋಪೀನಾಂ ಎಂಬುವ ಪದಕ್ಕೆ ವ್ಯಾಖ್ಯಾನಕಾರರು 'ಶ್ರೀ ರಾಧಾ ಚಂದ್ರಾವಳೀ ಇತ್ಯಾದೀನಾಂ' ಎಂಬುವುದಾಗಿ ಹೇಳಿದ್ದಾರೆ ಆದ್ದರಿಂದಲೇ ಗೋಪಿಕಾಗೀತೆಯಲ್ಲಿ--

"ಜಯತಿ ತೇಽಧಿಕಂ ಜನ್ಮನಾ ವ್ರಜಃ<br>
ಶ್ರಯತ ಇಂದಿರಾ ಶಶ್ವದತ್ರ ಹಿ<br>
ದಯಿತ ದೃಶ್ಯತಾಂ ದಿಕ್ಷು ತಾವಕಾಃ<br>
ತ್ವಯಿ ಧೃತಾಸವಸ್ತ್ವಾಂ ವಿಚಿನ್ವತೇ"

ಗೋಪಿಯರು ಕೃಷ್ಣನನ್ನು ಕುರಿತು "ನಾಥನೇ ನಿನ್ನ ಜನನದಿಂದ ಗೋಕುಲವು ಬೆಳಗುತ್ತದೆ. ಇಲ್ಲಿ ಲಕ್ಷ್ಮಿಯು ನಿರಂತರವೂ ನೆಲೆಸಿದಂತಾಯಿತು ನಿನ್ನಲ್ಲೇ ತಮ್ಮ ಪ್ರಾಣಗಳನ್ನು ಇಟ್ಟವರಾದ ನಿನ್ನ ಗೋಪಿಯರೆಲ್ಲರೂ ನಿನ್ನನ್ನೇ ಹುಡುಕುತ್ತಿದ್ದಾರೆ" ಎಂಬುವುದಾಗಿ ಹೇಳಲ್ಪಟ್ಟಿದೆ.

ಗೋಪಿಯರ ಯಾರಹೆಸರನ್ನೂ ಹೇಳದೆ ವ್ಯಾಸರು ಸೂಚ್ಯವಾಗಿ ಗೋಪಿಯರು ಎಂದು ಮಾತ್ರ ಅವರ ಅಮರ ಪ್ರೇಮದ ವಿಚಾರ ತಿಳಿಸಿದ್ದಾರೆ ಭಾಗವತದ ದಶಮಸ್ಕಂದದಲ್ಲಿ ಶ್ರೀಕೃಷ್ಣನು ರಾಸಲೀಲೆಯಾದನಂತರ ಗೋಪಿಯರು ಅಹಂಭಾವವನ್ನು ಹೋಗಲಾಡಿಸಲು ಕಣ್ಮರೆಯಾದಾಗ ಇತರ ಗೋಪಿಯರು ಕೃಷ್ಣನನ್ನು ಹುಡುಕುತ್ತಾ ಹೋಗುವಾಗ --

ಕಾಸಿತೇನ ಸಮಂಯಾತಾ<br>
ಕೃತಪುಣ್ಯಮದಾಲಸಾ<br>
ಪದಾನಿ ತಸ್ಯಾಶ್ಚೈತಾನಿ<br>
ಘನಾನ್ಯಲ್ಪ ತನೂನಿ ಚ

ಎಂಬುವುದಾಗಿ ಯಾವಳೋ ಪುಣ್ಯಾತ್ಮಳು ಮದಿಸಿದ ಮಂದಗಮನಳಾಗಿ ಅವನೊಡನೆ ನಡೆದು ಹೋಗಿರುವಳು. ಇಲ್ಲಿ ಹೂವುಗಳನ್ನು ಕಿತ್ತು ಚೆಲ್ಲಾ

ಟವಾಡಿರುವರು ಎಂಬುವುದಾಗಿ ಯಾವಳೋ ಸುಕೃತದ ಹೆಣ್ಣನ್ನು ಕುರಿತು ಮಾತನಾಡಿಕೊಳ್ಳು ವರು ಇವಳೇ ಏಕೆ ರಾಧೆಯಾಗಿರಬಾರದು? ಬುದ್ಧಿಗೆ ಗ್ರಾಹ್ಯವಾಗದ ಈ ನಿಗೂಡವಾದ ರಾಧಾ ತತ್ವವಿವೇಚನೆ ಮಾಡದೆ ಶ್ರೀಕೃಷ್ಣನು ಪರಮಾತ್ಮ-- ರಾಧೆಯು ರಾಸಕ್ರೀಡೆಯ ಸಮಯದಲ್ಲಿ ಸ್ವಯಂ ಭಗವಾನ್ ಶ್ರೀಕೃಷ್ಣ ತನ್ನ ಕ್ರೀಡೆಗೋಸ್ಕರ ಕರೆಸಿ ಕೊಂಡ ಸಾಕ್ಷಾತ್ ಲಕ್ಷ್ಮೀ ಎಂಬುವುದಾಗಿ ತಿಳಿದು ರಾಧಾಕೃಷ್ಣರ ಸ್ಮರಣೆಯನ್ನು ಮಾಡುವುದು ಬಲಿತು, ಬ್ರಹ್ಮ ವೈವರ್ತಕ ಪುರಾಣ ಪ್ರಕಾರ ರಾಸಮಂ ಡಲದಲ್ಲಿ ರಾಧೆಯು ಶ್ರೀ ಕೃಷ್ಣನ ಪ್ರಾಣಗಳಿಂದ ಪ್ರಾದುರ್ಭವಿಸಿದಳು ಎಂಬುವುದಾಗಿ ಸೂಚಿಸಿರುತ್ತೆ ರಾಧೆಯು ಜೀವಾತ್ಮ ಶ್ರೀ ಕೃಷ್ಣನು ಪರಮಾತ್ಮ ಎಂಬುವುದಾಗಿ ದಾರ್ಶನಿಕರ, ತತ್ವವಾದಿಗಳ ವಾದ ದೇವೀಭಾಗವತದಲ್ಲಿ ರಾಧೆಯು ಪಂಚ ಶಕ್ತಿಗಳಲ್ಲಿ ಒಬ್ಬಳು ಎಂದು ಹೇಳುವಾಗ --

ಗಣೇಶ ಜನನೀ ದುರ್ಗಾ
ರಾಧಾ ಲಕ್ಷ್ಮೀ ಸರಸ್ವತೀ
ಸಾವಿತ್ರೀ ಚ ಸೃಷ್ಟಿವಿದೌ
ಪ್ರಕೃತಿಃ ಪಂಚಧಾ ಸ್ಮೃತಾಃ

ಎಂದು ಉಲ್ಲೇಖಿಸಲ್ಪಟ್ಟಿದೆ. ಬ್ರಹ್ಮಸಂಹಿತೆಯು ಕೃಷ್ಣನೇ ರಾಧೆ ರಾಧೆಯೇ ಕೃಷ್ಣನು ಎಂಬುವುದಾಗಿ ಏಕತ್ವವನ್ನು ಹೇಳುತ್ತೆ ("ಯಃ ಕೃಷ್ಣಃ ಸಾಪಿ ರಾಧಾ ಯಾ ರಾಧಾ ಕೃಷ್ಣ ಏವ ಸಃ") ರಾಧಾ ಕೃಷ್ಣರು ಪರಂಜ್ಯೋತಿಸ್ವರೂಪ ಅವಿಬಾಜ್ಯಸಂಬಂಧ ಅವ ರದ್ದು -- ಪ್ರಕೃತಿ ಪುರುಷರಂತೆ ರಾಧೆಯನ್ನು ಬಿಟ್ಟು ಕೃಷ್ಣನನ್ನು ಜಪಿಸುವಂತಿಲ್ಲ. ಹೂವಿನಿಂದ ವಾಸ ನೆಯನ್ನು ಬೇರ್ಪಡಿಸುವಂತಿಲ್ಲ ಸೂರ್ಯನಿಂದ ರಶ್ಮಿಯನ್ನು ದೂರಮಾಡುವಂತಿಲ್ಲ ಆದ್ದರಿಂದಲೇ ರಾಧೆ ಮಹಾ ಶಕ್ತಿಸ್ವರೂಪಿಣಿ ಆಕೆ ಮಹಾದೇವಿ ಆದರ್ಶಪ್ರೇಮಕ್ಕೆರಾಧೆನಿದರ್ಶನಳು ಸ್ಕಾಂದ ಪುರಾ ಣದಲ್ಲಿ ಶ್ರೀರಾಧೆಯ ಕೃಪೆಯನ್ನು ಕೋರಿ ಪ್ರಭಾ ವತಿ ಎಂಬುವ ಯುವತಿ ರಾಧೆಯನ್ನು ಅರ್ಚಿಸಿ ಕೃತಾರ್ಥಳಾದಳು, ಆಕೆಯನ್ನು 'ಉಪರಾಧೆ' ಎಂಬು ವುದಾಗಿ ಕರೆಯುತ್ತಾರೆ ಎಂದು ಹೇಳಿರುತ್ತೆ ಹರಿ ತಂತ್ರ ಎಂಬುವ ಗ್ರಂಥದಲ್ಲಿ 'ಉಪರಾಧೆ'ಯನ್ನು ಕುರಿತು---

"ಕಾಚಿಚ್ಚಂದ್ರಕಳಾ ನಾಮ್ನಿ
ಗಾಂಧರ್ವೀ ನವಯೌವನಾ
ಸುಖರೂಪಾ ಮಹಾಬುದ್ಧಿ
ರಾಸೀದಿಂದ್ರಪ್ರಿಯಾನುಗಾ
ಶ್ರೀಕೃಷ್ಣಂ ಪರಯಾಭಕ್ತ್ಯಾ
ಸ ಪ್ರಿಯಂ ರಾಸಮಂಡಲೇ
ಸಂತೋಷ್ಯ ಸೋಪರಾಧಾಖ್ಯಾಂ
ಲಬ್ಧ್ವಾಸೀ ನ್ನಿತ್ಯ ಕೇಳಿಗಾ"

ಚಂದ್ರಕಳಾ ಎಂಬುವ ಒಬ್ಬ ಗಂಧರ್ವ ಕನ್ಯೆ ಆಕೆ ನವಯೌವನಾಂಗಿ, ಸುಂದರದೇಹವುಳ್ಳವಳು ಮಹಾ ಮೇಧಾವಿ ಇಂದ್ರನ ಪತ್ನಿಯ ಸಖಿಯಾ ದವಳಿಗೆ ಮಗಳಾಗಿ ಹುಟ್ಟಿ 'ರಾಧೆ' ಎಂಬುವ ಹೆಸರಿ ನಿಂದ ಪ್ರಸಿದ್ಧಳಾದಳು ಈಕೆಯ ಪತಿ ಚಂದ್ರಗೋ ಪನು

ಈ ರಾಧೆಯು ಶ್ರೀಕೃಷ್ಣನಿಗೆ ಪ್ರಾಣಪ್ರಿಯಳು ರಾಧಾಮಂಟಪದಲ್ಲಿ ನಿತ್ಯವೂ ರಾಸಲೀಲೆಯಲ್ಲಿ ತಾನು ಭಾಗಿಯಾಗಿ ಅವನ ಪರಮಭಕ್ತಳಾಗಿ ತನ್ನ ಶುದ್ಧವಾದ ಪ್ರೇಮದಿಂದ, ಕುಣಿತ, ಹಾಡಿನಿಂದ ಅವನನ್ನು ಮೆಚ್ಚಿಸಿದ್ದರಿಂದ ಕೃಷ್ಣನು ಈಕೆಯನ್ನು "ಉಪರಾಧ" ಎಂದು ಕರೆದನು ಸ್ಕಾಂದಪುರಾಣ ದಲ್ಲಿ---

"ಶ್ರೀರಾಧಾ ಕೃಪಯಾ ಪುಣ್ಯೈಃ
ಪಿತೃಕನ್ಯಾ ಪ್ರಭಾವತಿ
ದೇವರೂಪಾ ಸುಸಂಯಾತಾ
ಕುಂಜೇಶ್ವರ್ಯಾಃ ಪ್ರಸಾದತಃ

(ಪ್ರಭಾವತಿ ಎಂಬುವ ಕನ್ಯೆ ರಾಧೆಯನ್ನು ಅರ್ಚಿಸಿ, "ರೂಪರಾಧ" ಎಂಬುವ ಹೆಸರಿನಲ್ಲಿ ಗೋಲೋಕದಲ್ಲಿ ಹುಟ್ಟಿ ಪ್ರಸಿದ್ಧಳಾದಳು) ಎಂದು ಹೇಳಲ್ಪಟ್ಟಿದೆ ರಾಧಾ ಕೃಷ್ಣರ ಭಾವವು ಎಲ್ಲರನ್ನೂ ಆಕರ್ಷಿಸಿರುವುದು, ಶೃಂಗಾರ ಭಾವಯುಕ್ತವಾಗಿ ರುವುದರಿಂದ, ನಿಷ್ಕಪಟವಾದ ಭಕ್ತಿಯಿಂದ ಕೂಡಿ ರುವುದರಿಂದ ರಾಸಲೀಲೆ ಜೀವಾತ್ಮಾ ಪರಮಾ ತ್ಮರ ಮಿಲನದಿಂದ ಅವರ ಹೃದಯಗಳು ನಿರ್ವಿಕಾ ರತೆಯಿಂದ ನಿಷ್ಕಲ್ಮಷ ಪ್ರೇಮದ ತುದಿ ಮೆಟ್ಟಲನ್ನು ಮುಟ್ಟಿತ್ತು ರಾಧೆಯು ರಾಸೇಸ್ವರಿ ಎಲ್ಲರ ಪ್ರಾಣಗಳ ಅಧಿದೇವತೆ. ಕೃಷ್ಣಸ್ತು ಭಗವಾನ್ ಸ್ವಯಂ -- ರಾಧೆ ಪ್ರಾಣಾಧಿಷ್ಠಾತೃದೇವೀ ಎಂಬುವುದು ಸತ್ಯಸಂಗತಿ -- ದೇವೀ ಭಾಗವತದಲ್ಲಿ ಆಕೆಯನ್ನು ಕುರಿತು---

"ಸ್ತ್ರೀರತ್ನಸಾರ ಸಂಭೂತಾ
ಕೃಷ್ಣವಕ್ಷಸ್ಥಲೇ ಸ್ಥಿತಾ
ಯಥಾಂಬರೇ ನವಘನೇ
ಲೋಲಾ ಸೌದಾಮಣೀ ಯಥಾ"

ರಾಸೇಸ್ವರಿಯಾದ ರಾಧೆಯು ಸ್ತ್ರೀರತ್ನಳು, ಭಗ ವಂತನ ಅಂಶದವಳು ಶ್ರೀಕೃಷ್ಣನ ವಕ್ಷಸ್ಥಳದಲ್ಲಿ ನಿತ್ಯ ವಾಸಿತಳು ನೀಲಾಕಾಶದಲ್ಲಿ ದೊಡ್ಡ ಮೋಡಗಳ ಮಧ್ಯೆ ಮಿಂಚುವ ಮಿಂಚು ಎಂಬುವುದಾಗಿ ತಿಳಿಸಿದೆ.

ಶ್ರೀಕೃಷ್ಣ ಜನ್ಮಖಾಂಡದಲ್ಲೂ ಕೂಡ "ರಾ--ಕಾರೋ ದಾನವಾಚಕಃ ಧಾ--ನಿರ್ವಾಣಂ ಚ ತತ್ಪ್ರಾತ್ರೀ ತೇನ ರಾಧಾ ಪ್ರಕೀರ್ತಿತಾ" --ಎಂಬುವು ದಾಗಿ ಉದಹರಿಸಿದ್ದಾರೆ ಪರಮ ಭಕ್ತಳಾದ ಅನನ್ಯ ಶರಣ್ಯೆಯೊಬ್ಬಳು ರಾಧೆಯು ಎಂಬುವುದಾಗಿ ನಾವು ಸಿದ್ಧಾಂತಮಾಡಬಹುದು ಇದಕ್ಕೆ ಪ್ರಮಾಣ---

ರಾಕಾರೋ ನಿಶ್ಚಲಾಂ ಭಕ್ತಿಂ ದಾಸ್ಯಂ
ಕೃಷ್ಣಪದಾಂಬುಜೇ
ಸರ್ವೇಪ್ಸಿತಂ ಸದಾನಂದಂ
ಸರ್ವಸಿದ್ಧೌಘ ಮೀಶ್ವರಂ
ಧಾಕಾರ ಸ್ಸಹವಾಸಂ ಚ
ತತ್ತುಲ್ಯ ಕಾಲಮೇವ ಚ
ದದಾತಿ ಸಾರ್ಷ್ಟಿಂ ಸಾರೂಪ್ಯಂ
ತತ್ವಜ್ಞಾನ ಹರೇಃ ಸಮಂ

ಅಂದರೆ ರಾಧಾ ಶಬ್ದವನ್ನು ರಾಕಾರದಲ್ಲಿ ಸರ್ವರ ಅಭೀಷ್ಟಗಳನ್ನು ಕೊಡುವ ಸದಾನಂದ ಶ್ರೀಕೃಷ್ಣ ಪಾದಾರವಿಂದಗಳಲ್ಲಿ ನಿಶ್ಚಲವಾದ ದಾಸ್ಯಭಕ್ತಿ. ಅವ ನಲ್ಲಿ ಆರಾಧನೆ ಪೂಜೆ ಸೂಚ್ಯ ಧಾಕಾರದಲ್ಲಿ ಅವನ ಸಾಮಿಪ್ಯ ಸಾಯುಜ್ಯಗಳನ್ನು ಹೊಂದುವ ತತ್ವಜ್ಞಾನ ಯಾವಳು ಕೃಷ್ಣನಲ್ಲಿ ಪರಾಭಕ್ತಿಯಿಂದ ನಿಶ್ಚಲಭಕ್ತಿ ಯಿಂದ ನಿರ್ಹೇತುಕ ಪ್ರೇಮದಿಂದ ಶರಣು ಹೊಂದಿ ರುತ್ತಾಳೋ ಆ ಅನನ್ಯ ಶರಣ್ಯೆಯೇ ರಾಧೆ. ಮತ್ತೆ ಬೃಹದ್‌ಬ್ರಹ್ಮಸಂಹಿತೆಯಲ್ಲಿ---

ಗೋಪನಾ ದುಚ್ಯತೇ ಗೋಪೀ
ಶ್ರೀಲೀಲಾ ರಾಧಿಕಾಭಿದಾ
ದೇವೀ ಕೃಷ್ಣಮಯಿಯಾ
ಜ್ಞೇಯಾ ರಾಧಿಕಾ ಪರದೇವತಾ

(ಗೋಕುಲದಲ್ಲಿ ಗೋಪಿಯನ್ನು ರಾಧೆಯೆಂದು ಕರೆಯುತ್ತಾರೆ ಆಕೆಯ ಅಂಶದಿಂದ ಸರ್ವಶಕ್ತಿಗಳು ಹುಟ್ಟಿದಹಾಗೆ ಶ್ರೀಲೀಲಾ ಕೂಡ ರಾಧೆಯಾದಳು.)

ಇನ್ನೂ ರಾಧೆಯ ವಿವರಣೆಯನ್ನು ನೀಡುತ್ತಾ ಈ ಸಂಹಿತೆಯು---

ವೈಕುಂಠೇತು ರಮಾ ಪ್ರೋಕ್ತಾ
ಅಯೋಧ್ಯಾಯಂತು ಜಾನಕೀ
ರುಕ್ಮಿಣೀ ದ್ವಾರವತ್ಯಾಂತು
ರಾಧಾ ಬೃಂದಾವನೇ ವನೇ

(ಶ್ರೀವೈಕುಂಠದಲ್ಲಿ ಲಕ್ಷ್ಮಿ ಅಯೋಧ್ಯೆಯಲ್ಲಿ ಅಯೋನಿಜೆ ಜಾನಕಿ ದ್ವಾರಕೆಯಲ್ಲಿ ರುಕ್ಮಿಣಿ ಬೃಂದಾವನದಲ್ಲಿ ರಾಸಲೀಲೆಯಲ್ಲಿ ರಾಧೆ) ಆದ್ದರಿಂದಲೇ-- ಪುರಾಬೃಂದಾವನೇ ರಮ್ಯೇ ಗೋಲೋಕೇ ರಾಸಮಂಡಲೇ-- ಎಂಬುವ ಉಕ್ತಿ ಪ್ರಸಿದ್ಧವಾಗಿದೆ ರಾ ಶಬ್ದೋಚ್ಚಾರಣ ಮಾತ್ರದಿಂದ ದುರ್ಲಭವಾದ ಮುಕ್ತಿ ಧಾ ಶಬ್ದೋಚ್ಚಾರಣದಿಂದ ಮಾತ್ರವೇ ವಿಷ್ಣು ಸಾಯುಜ್ಯವನ್ನು ಹೊಂದಿತು ಎಂಬುವುದು ವೇದಾಂತಿಗಳ ವಾದ

ನಾರದ ಪಾಂಚರಾತ್ರದಲ್ಲಿ ರಾಧೆಯು ವೃಷಭಾಸುರನ ಮಗಳು ಶ್ರೀಕೃಷ್ಣನಲ್ಲಿ ಅಧಿಕವಾದ ಅನುರಾಗದ ಆನಂದದಲ್ಲಿ ಮಗ್ನಳಾಗಿದ್ದವಳು ಅವನಿಗೆ ಅತ್ಯಂತ ಪ್ರಿಯಳಾಗಿದ್ದವಳು ಎಂಬುವುದಾಗಿ ವಿವರಣೆ ನೀಡಲ್ಪಟ್ಟಿದೆ

## ರಾಧಾಕೃಷ್ಣ ತತ್ವ

ನಿತ್ಯ ಲೀಲಾ ವಿಭೂತಿಯಲ್ಲಿ ರಾಧಾಕೃಷ್ಣ ತತ್ವ ಹರಡಿದೆ. ಬೃಂದಾವನವು ನಂದನಂದನ ಆತ್ಮ ಬೃಂದಾವನದ ಎಲ್ಲಾ ಚಟುವಟಿಕೆಗಳಿಗೆ ರಾಸೇಶ್ವರಿಯಾದ ರಾಧೆಯೇ ಕಾರಣ ಶ್ರೀಕೃಷ್ಣನು ರಾಧೆಯನ್ನು ಒಂದು ಅರೆಕ್ಷಣ ಬಿಟ್ಟಿರಲಾರ ರಾಧಾಕೃಷ್ಣರ ರೂಪವು ಪ್ರೇಮಕ್ಕೆ ಸಂಕೇತ ಆನಂದ ನಿಧಿ ಮಧುರಕ್ಕಿಂತ ಅತಿಮಧುರ ಅವರ ರೂಪ ಲಾವಣ್ಯ ಯೋಗಿಗಳಿಗೆ ಸುಲಭಮಾರ್ಗ ಸೂರ್ಯ [illegible]ಗ್ರರಲ್ಲಿರುವ ಕಾಂತಿಗೂ ಹೂವಿನಲ್ಲಿರುವ ಪ[illegible]ಕ್ಕೂ ಧೂಪದಲ್ಲಿರುವ ಜ್ಯೋತಿಗೂ ಹೇಗೆ ಭೇದವು ಇಲ್ಲವೋ ಹಾಗೆಯೇ ರಾಧೆಯನ್ನು ಬಿಟ್ಟು ಕೃಷ್ಣನಿಲ್ಲ ಅವರಲ್ಲಿ ಭೇದವಿಲ್ಲ

ಶ್ರೀಕೃಷ್ಣನ ಆತ್ಮರಾಧೆ ರಾಧೆಯ ಆತ್ಮಶ್ರೀಕೃಷ್ಣ ಆ ಅನಂತ ಪರಮತತ್ವವನ್ನು ಅರಿಯದೇಕಾದರೆ ರಾಧಾಕೃಷ್ಣರ ಆರಾಧನೆ ಅವಶ್ಯಕ ಸುಲಭವಾಗಿ ಸಿದ್ಧಿಯನ್ನು ಪಡೆಯಬಹುದೆಂದು ಗರ್ಗ ಸಂಹಿತೆ ತಿಳಿಸುತ್ತೆ

ವ್ಯಾಕರಣ ಶಾಸ್ತ್ರ ಪ್ರಕಾರ "ರಾದ್ ಸಾದ್ ಸಂಸಿದ್ಧೌ" ರಾದ್ ಸಾದ್ ಶಬ್ದಗಳ ಅರ್ಥ ಸಿದ್ಧಿ ಎಂಬುವುದು ರಾಧಾ ಸಾಧನಾ ಇವೆರೆಡು ಒಂದೇ ಅರ್ಥ ಸಿದ್ಧಿಸುವುದು ಶ್ರೀಕೃಷ್ಣನು ಪುರುಷೋತ್ತಮನು ಪ್ರಪಂಚವೆಲ್ಲಾ ಅವನ ಸ್ವರೂಪವೇ. ರಾಧೆ ಪ್ರಕೃತಿ ಮಾತೆ ಕೃಷ್ಣನ ಜೀವಕೋಟಿಯ ಪಿತನು ಬ್ರಹ್ಮ ಆತ್ಮ ಪ್ರಕೃತಿಪುರುಷ, ಜಡ, ಚಿತ್ತು, ಅಚಿತ್ತು ಎಲ್ಲವೂ ಶ್ರೀಕೃಷ್ಣನ ವಿಭಿನ್ನಲೀಲಾಸ್ವರೂಪಗಳು ತತ್‌ಸ್ವರೂಪ ಶಕ್ತಿಯೇ ರಾಧೆ ಶ್ರೀಕೃಷ್ಣನು ರಾಧೆಯಿಂದ ಬೇರೆಯಾಗಿರಲಾರ ಆಕೆಯೇ ಮಹಾಲಕ್ಷ್ಮಿ ಎಂಬುವುದಾಗಿ ಬ್ರಹ್ಮವೈವರ್ತಪುರಾಣದಲ್ಲಿ---

"ರಾಧಾ ವಾಮಾಂಶಭಾಗೇನ
ಮಹಾಲಕ್ಷ್ಮೀ ಬಭೂವಸಾ
ತಸ್ಮಾದಿಷ್ಠಾತೃ ದೇವಿಸಾ
ಗೃಹಲಕ್ಷ್ಮೀರ್ಬಭೂವಸಾ
ಚತುರ್ಭುಜಸ್ಯ ಸಾಪತ್ನೀ
ದೇವೀ ವೈಕುಂಠವಾಸಿನೀ
ತದಂಶಾ ರಾಜಲಕ್ಷ್ಮೀ ಶ್ಚ
ರಾಜಸಂಪತ್ ಪ್ರದಾಯಿನೀ"

ಎಂಬುವುದಾಗಿ ಶ್ರೀ ರಾಧಾ ಅಂಶದಿಂದಲೇ ಮಹಾಲಕ್ಷ್ಮಿ ಗೃಹಲಕ್ಷ್ಮಿ ರಾಜ್ಯಲಕ್ಷ್ಮಿ ಮೋಕ್ಷಲಕ್ಷ್ಮೀ ಉದಯಿಸಿದರು ಎಂದು ಹೇಳುತ್ತೆ. ರಾಧಾ ಶಬ್ದಸ್ಯ ವ್ಯುತ್ಪತ್ತಿಃ ಸಾಮವೇದೇ ನಿರೂಪಿತಾ (ರಾಧಾ ಶಬ್ದದ ವ್ಯುತ್ಪತ್ತಿ ಸಾಮವೇದದಲ್ಲಿ ವಿವರಿಸಿದೆ) ರಾಧೆ ದೇವ ದಾನವ ಮುನಿ ಮಾನವರಿಗೆ ಮೋಕ್ಷಕೊಡುವ ಲಕ್ಷ್ಮೀ ಮಾತೆ ರಾಧಾ ಶಬ್ದದಲ್ಲಿ ರ್+ಅ+ದ್+ಆ -- ಇವುಗಳ ಅರ್ಥವಿವರಣೆ ಮಾಡುವಾಗ (ರ್) ಕಾರವು ಕೋಟಿ ಜನ್ಮಗಳ ಪಾಪವನ್ನು ಹೋಗಲಾಡಿಸುತ್ತೆ (ಅ) ಕಾರವು ಗರ್ಭವಾಸದುಃಖ, ರೋಗ ಮೃತ್ಯುಭಯವನ್ನು ನಾಶಮಾಡುತ್ತೆ (ದ್) ಕಾರವು ಆಯುರ್ವೃದ್ಧಿಕರವು. (ಆ) ಕಾರವು ಭವಬಂಧನದಿಂದ ವಿಮುಕ್ತಿಯನ್ನು ನೀಡುತ್ತದೆ ರಾಧಾ ಶಬ್ದದ ಫಲ ಪ್ರಾಪ್ತಿಯನ್ನು ಹೇಳುತ್ತಾ ಬ್ರಹ್ಮವೈವರ್ತಪುರಾಣವು ರಾ ಶಬ್ದ ಉಚ್ಚಾರಣೆ ಮಾತ್ರದಿಂದಲೇ ನಿಶ್ಚಲಭಕ್ತಿ ಸರ್ವವಾಂಚಿತಸಿದ್ಧಿ ಮಹದೈಶ್ವರ್ಯವನ್ನೂ ಧಾ ಕಾರ ಉಚ್ಚಾರಣೆಯಿಂದ ಅನಂತ ಕಾಲವೂ ಶ್ರೀಹರಿಯ ಸಾಮೀಪ್ಯ ಸಾಯುಜ್ಯ ಪದವಿಗಳನ್ನು ಪಡೆದು ವೀತರಾಗ ಶೋಕ ಮೋಹಗಳಿಂದ ಮುಕ್ತನಾಗಿ ರಾ 'ಶಬ್ದವಾಚಕನಾದ ಶ್ರೀ ಮಹಾವಿಷ್ಣು ವಿನಾ ಧಾ ಶಬ್ದ ವಾಚಕಳಾದ ಧಾತ್ರೀ ( ತಾಯಿ) ಇವರ ಕೃಪಾಕಟಾಕ್ಷೆಗೆ ಒಳಗಾಗುತ್ತಾರೆ ಎಂಬುವುದಾಗಿ ರಾಧಾ ಶಬ್ದವನ್ನು ಕೊಂಡಾಡಿದೆ

ಶ್ರೀ ರಾಧಾದೇವಿ ಕೃಪೆಯಿಲ್ಲದೆ ಶ್ರೀಕೃಷ್ಣನ ಅನು

ಗ್ರಹ ದುರ್ಲಭ ಋಷಿಗಳು ಆತ್ಮರಾಧೆ, ಆತ್ಮಾರಾಮನು ಶ್ರೀಕೃಷ್ಣನು ಎಂಬುವುದಾಗಿ ಭಾವಿಸಿ ಆತ್ಮಾರಾಮ ಶಬ್ದವನ್ನು ಉಚ್ಚರಿಸಿದಾಗ ರಾಧಾಕೃಷ್ಣ ತತ್ವ ಅವರ ಹೃದಯಗಳಲ್ಲಿ ಜೀವನು ಪರಮಾತ್ಮನ ಅಭಿನ್ನನೆಂಬ ಭಾವ ತಾಳುತ್ತಿದ್ದರು

ರಾಧಾಷ್ಟಮಿಯ ಮಹಿಮೆಯನ್ನು ವರ್ಣಿಸುತ್ತಾ ಋಷಿಗಳು---

ಭಾದ್ರೇಮಾಸಿ ಸಿತಾಷ್ಟಮ್ಯಾಂ
ಜಾತಾ ಶ್ರೀ ರಾಧಿಕಾ ಯತಃ
ಅಷ್ಟಮಿಾ ಸಾದ್ಯ ಸಂಪ್ರಾಪ್ತಾ
ತಾಂ ಕುರ್ಯಾಮಃ ಪ್ರಯತ್ನತಃ

ಇತ್ಯಾದಿ ಭಾದ್ರಪದಶುದ್ಧ ಅಷ್ಟಮಿ ದಿನ ರಾಧೆ ಹುಟ್ಟಿದಳು, ಆದಿನ ರಾಧಾಕೃಷ್ಣರನ್ನು ಪೂಜಿಸಿದರೆ ಸರ್ವಪಾಪಗಳು ನಾಶವಾಗುತ್ತವೆ ಎಂದು ಹೇಳಿದ್ದಾರೆ.

ಕಾರ್ತೀಕಮಾಸದಲ್ಲಿ ರಾಧಾ ದಾಮೋದರರಿಗೆ ಧೂಪದೀಪ ಹಚ್ಚಿದರೆ ಸರ್ವಪಾಪಗಳು ಹೋಗಿ ಪುಷ್ಪ ಅರ್ಪಿಸಿದರೆ ವೈಕುಂಠಕ್ಕೆ ಹೋಗುತ್ತಾರೆ (ಆಶ್ವಯುಜ ಪೌರ್ಣಿಮಾಸ್ಯೆಯಿಂದ ಮೊ ದಲು ಉತ್ಥಾನ ದ್ವಾದಶೀವರೆಗೂ ಕಾರ್ತೀಕ ವ್ರತವನ್ನು ಆಚರಿಸಬೇಕು) ದೇವಿ ಭಾಗವತದಲ್ಲಿ---

"ಯಃ ಕಾರ್ತೀಕ್ಯಾಂ ಪೌರ್ಣಿಮಾಯಾಂ
ರಾಧಾ ಜನ್ಮೋತ್ಸವಂ ಬುಧಃ
ಕುರುತೇ ತಸ್ಯ ಸಾನ್ನಿಧ್ಯಂ
ಸಾಕ್ಷಾತ್ ರಾಸೇಶ್ವರೀ ಪರಾ

ಎಂಬುವ ಪ್ರಮಾಣದಿಂದ ಕಾರ್ತೀಕ ಪೌರ್ಣಿಮೆ ದಿನ ರಾಧೆಯನ್ನು ಪೂಜಿಸಿದರೆ ಆಕೆಯ ಸಾನ್ನಿಧ್ಯವನ್ನು ಹೊಂದುತ್ತಾರೆ ಎಂಬುವುದು ಬಹುಕಾಲದಿಂದ ಬಂದಂತಹ ನಂಬಿಕೆ ಗೌತಮಿಾ ತಂತ್ರ ಪ್ರಕಾರ ರಾಧೆಯು ಪರಾರೂಪಿಣಿ ಸಂಮೋಹಿನೀ, ಸರ್ವಕಾಂತಿಸ್ವರೂಪಿಣಿ, ಸರ್ವ ಲಕ್ಷ್ಮೀಸ್ವರೂಪಿಣಿ, ಪರದೇವತೆಯಾದ ಆಕೆ ಶ್ರೀಕೃಷ್ಣಸ್ವರೂಪಳು ಚೈತನ್ಯ ಚರಿತಾಮೃತದಲ್ಲಿ ಆಕೆಯನ್ನು ಮಹಾಭಾವಸ್ವರೂಪಿಣೀ ಜಗದಾಧಾರಸ್ವರೂಪಳು ಎಂಬುವುದಾಗಿ ವರ್ಣಿತವಾಗಿದೆ ಶ್ರೀ ಋಗ್ವೇದಾಂತರ್ಗತ ರಾಧಿಕೋಪನಿಷತ್‌ನಲ್ಲಿ ರಾಧೆಯ ಉಪಾಸನೆಯನ್ನು ಹೇಳುವಾಗ---

ರಾಧಾ ರಾಸೇಶ್ವರೀ ರಮ್ಯಾ
ಕೃಷ್ಣಮಂತ್ರಾಧಿ ದೇವತಾ
ಸರ್ವಾದ್ಯಾ ಸರ್ವ ವಂದ್ಯಾಚ
ಬೃಂದಾವನ ವಿಹಾರಿಣೀ

ಬೃಂದಾರಾಧ್ಯಾರಮಾ
ಶೇಷಗೋಪಿಮಂಡಲ ಪೂಜಿತಾ
ಸತ್ಯಾ ಸತ್ಯಪರಾ ಸತ್ಯಭಾಮಾ
ಶ್ರೀಕೃಷ್ಣವಲ್ಲಭಾ

ವೃಷಭಾನುಸುತಾ ಗೋಪೀ
ಮೂಲ ಪ್ರಕೃತಿರೀಶ್ವರೀ
ಗಂಧರ್ವಾ ರಾಧಿಕಾ
ರಮ್ಯಾ ರುಕ್ಮಿಣೀ ಪರಮೇಶ್ವರೀ

ಪರಾತ್ ಪರತರಾ ಪೂರ್ಣಾ
ಪೂರ್ಣ ಚಂದ್ರನಿಭಾನನಾ
ಭಕ್ತಿ ಮುಕ್ತಿ ಪ್ರದಾ ನಿತ್ಯಂ
ಭವವ್ಯಾಧಿ ವಿನಾಶಿನೀ

ಇತ್ಯೇತಾನಿ ನಾಮಾನಿ ಯಃ ಪಠೇತ್ ಸಜೀವನ್ಮುಕ್ತೋಭವತಿ ರಾಧೇಯ -- ಈ ನಾಮಗಳನ್ನು ಜಪಿಸುವರು ಜೀವನ್ಮುಕ್ತರಾಗುತ್ತಾರೆ ಎಂದು ಉಕ್ತವಾಗಿದೆ

ಉಪಾಸನಾವಿಧಿಯಲ್ಲಿ ರಾಧಾ ಆರೂಢ ಚಕ್ರ ಬಂಧನದಲ್ಲಿ ತೈಲಧಾರೆಯಂತೆ ರಾಧೆಯನ್ನು ಅವಿಚ್ಛಿನ್ನ ಭಕ್ತಿಯಿಂದ ಉಪಾಸನೆ ಮಾಡಿದರ ಮುಕ್ತಿಯೆಂದು ಹೇಳುವಾಗ ಈ ನಿದರ್ಶನ ಸಾಕ್ಷಿ---

ರ+ಆ+ದ+ಆ = ರಾಧಾ

1 2 3 4 ರಾಧಾ = ರಾಧೆಯನ್ನು
4 1 2 3 ಆರಾಧ = ಉಪಾಸನೆ ಮಾಡಿದರೆ
3 4 1 2 ಧಾರಾ = ತೈಲ ಧಾರೆಯಂತೆ
ಅವಿಚ್ಛಿನ್ನ ಭಕ್ತಿ
ಆವಿರ್ಭವಿಸುತ್ತೆ

ಜಯದೇವನು ಗೀತ ಗೋವಿಂದ ಮಹಾ ಕಾವ್ಯದಲ್ಲಿ ರಾಸಕ್ರೀಡೆಯನ್ನು ವರ್ಣಿಸುತ್ತಾ ರಾಧೆಯ ಅಪಾರ ಪ್ರೇಮದಮಹಿಮೆಯನ್ನು ವರ್ಣಿಸುವಾಗ-

ಕಂಸಾರಿರಪಿ ಸಂಸಾರ
ವಾಸನಾಬಂಧ ಶೃಂಖಲಾಂ
ರಾಧಾ ಮಾಧಾಯ ಹೃದಯೇ
ತತ್ಯಾಜ ವ್ರಜ ಸುಂದರೀಃ

ಸಂಸಾರ ವಾಸನಾಬಂಧನದಲ್ಲಿ ಸಿಲುಕಿದ ಶ್ರೀಕೃ

# ಸಪ್ತಗಿರಿ

ಬರಹಗಾರರಿಗೆ ಸೂಚನೆ

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು

೧) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂದಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ

೬) ಗೃಹಲಕ್ಷ್ಮಿ ಕಿಶೋರಜಗತ್ ಮೋದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು

೭) ಪ್ರಕಟವಾದ ಲೇಖನಗಳಿಗೆ ಸೂಕ್ತಸಂಭಾವನೆ ಉಂಟು

ಮಿಕ್ಕ ವಿವರಗಳಿಗೆ

ಸಂಪಾದಕರು
**ಸಪ್ತಗಿರಿ**
ತಿ ತಿ ದೇವಸ್ಥಾನ, ತಿರುಪತಿ-೫೧೭ ೫೦೭
ಚಿತ್ತೂರು ಜಿಲ್ಲೆ, ಆಂ ಪ್ರ.

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ (ವೈಕುಂಠ) ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು

* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ ತಿ ದೇ ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ, ಭಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭-ನೇ ಮೈಲಿಯ ಬಳಿ ವೈದ್ಯಸೌಲಭ್ಯ ಉಪಹಾರ ಸೌಲಭ್ಯ ಕ್ಯಾಂಟೀನ್

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ

* ಯಾತ್ರಿಕರನ್ನು ಪಂಡಾಗಳು, ವಂಚಕರಿಂದ ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಂದು ಅಧಿಕಾರಿ ಮತ್ತು ಸಿಬ್ಬಂದಿ

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.**

ಗಮನಿಕೆ ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮--೩೦ ಗಂಟೆಯವರೆಗೆ ಕೆಲಸಮಾಡುತ್ತದೆ ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦-೩೦ ರಿಂದ ೧--೦೦ ಗಂಟೆಯವರೆಗೆ ಕೆಲಸಮಾಡುತ್ತದೆ

ಷ್ಣನು ವ್ರಜ ಸುಂದರಿಯನ್ನು ತೊರೆದು ರಾಧೆಯನ್ನು ತನ್ನ ಹೃದಯಮಂದಿರದಲ್ಲಿ ಇಟ್ಟುಕೊಂಡು ತೃಪ್ತನಾದನು ರಾಧೆಯು ಮುಕುಂದನ ಸ್ಮರಣೆ ಮಾತ್ರದಲ್ಲಿ ಮಂತ್ರಮುಗ್ಧಳಾಗಿ ಮೈಮರೆತು ಕೃಷ್ಣನ ಮನಮಂದಿರದಲ್ಲಿ ರಾರಾಜಿಸುತ್ತಿದ್ದಳು ಕೃಷ್ಣನ ಅಗಲಿಕೆಯಿಂದ ವಿರಹದಿಂದ ಬಳಲುತ್ತಿದ್ದ ರಾಧೆಯ ಅವಸ್ಥೆಯನ್ನು ಜಯದೇವನು ತನ್ನ ಅಷ್ಟಪದಿಯಲ್ಲಿ---

ಹರಿರಿತಿ ಹರಿರಿತಿ ಜಪತಿ ಸಕಾಮಂ
ವಿರಹ ವಿಹಿತ ಮರಣೇವ ನಿಕಾಮಂ

ಎಂದು ಬಣ್ಣಿಸುವಾಗ ಕೃಷ್ಣ -- ರಾಧೆಯು ಬಹು ಆಸೆಯಿಂದ ನಿನ್ನನ್ನೇ ನಿರೀಕ್ಷಿಸುವ ಆತುರದಲ್ಲಿ ಅಗಲಿಕೆಗಿಂತ ಮರಣವೇಲೇಸು ಎಂದು ಹರಿಹರಿ ಎಂದು ಜಪಿಸುತ್ತಿದ್ದಾಳೆ --ಎಂಬುವುದಾಗಿ ವರ್ಣಿಸಿದ್ದಾನೆ

ಗೀತಗೋವಿಂದದ ೧೧ನೆಯ ಅಷ್ಟಪದಿಯಲ್ಲಿ ಕವಿ ಜಯದೇವನು ರಾಧಾಕೃಷ್ಣರ ವಿರಹ ವಿಲಾಸಗಳನ್ನು ವರ್ಣಿಸುವ ಶೈಲಿ, ಭಾಷೆ, ಭಾವ ರಸಪೂರ್ಣವಾಗಿ ಭಕ್ತಿಯ ಕಾಂತಾಸಕ್ತಿ ಆತ್ಮನಿವೇದನಾಶಕ್ತಿ ಪರಮ ವಿರಹಾಸಕ್ತಿರೂಪಾ ಇವುಗಳು ಆವಿರ್ಭಾವವಾಗಿ ಭಜಿಸುವ ಭಕ್ತರಿಗೆ ಅತಿಶಯವಾದ ಆನಂದವು ಉಂಟಾಗುತ್ತೆ

"ರತಿ ಸುಖಸಾರೇ ಗತಮಭಿಸಾರೇ
ಮದನ ಮನೋಹರ ವೇಷಂ
ನಕುರು ನಿತಂಬಿನಿ ಗಮನ
ವಿಲಂಬನ ಮನುಸರ ಹೃದಯೇಶಂ
ಧೀರ ಸಮೀರೇ ಯಮುನಾತೀರೇ
ವಸತಿ ವನೇ ವನಮಾಲೀ
ಗೋಪೀ ಪೀನ ಪಯೋಧರ
ಮರ್ದನ ಚಂಚಲ ಕರಯುಗಶಾಲೀ"

ಎಂಬುವುದಾಗಿ ಹಾಡುವಾಗ ಸಖಿಯು ರಾಧೆಯನ್ನು ಕುರಿತು "ನಿತಂಬಿನೀ ರಾಧೆ ರತಿ ಸುಖದ ಸಾರವನ್ನು ಸವಿದು ಅದರ ಫಲವನ್ನು ಕಾತುರದಿಂದ ನಿನಗೆ ನೀಡಲು ಮನೋಹರ ವೇಷದ ಮದನಾರಿ ಮುಕುಂದನು ಸಂಕೇತಸ್ಥಾನದಲ್ಲಿ ಕಾದು ಕುಳಿತಿದ್ದಾನೆ. ಅಲ್ಲಿ ವನಮಾಲಿಯಾಗಿ ಸುಳಿವ ತಂಗಾಳಿಯಲ್ಲಿ ಯಮುನಾತಟದ ನಿಕುಂಜದಲ್ಲಿ ಕಾದು ಕುಳಿತಿದ್ದಾನೆ. ತ್ವರೆ ಮಾಡದೆ ಅಲ್ಲಿಗೆ ಹೋಗು ಅವನು ಗೋಪಿಯರ ತುಂಬೆದೆಗಳನ್ನು ಮರ್ದಿಸುವುದಲ್ಲಿ ಹಸ್ತಕುಶಲನು" ಎಂಬುವುದಾಗಿ ಹಾಡುವಾಗ, ಶ್ರೀಹರಿಯ ಪ್ರಣಯ ಪ್ರಸಂಗಗಳು ನಮ್ಮ ಕಣ್ಣುಮುಂದೆ ಹಾದುಹೋಗುತ್ತವೆ.

ಜಯದೇವ ಕವಿ ರಾಧೆಯು ಲತಾಮಂಟಪದಲ್ಲಿ ಕೃಷ್ಣನಿಗಾಗಿ ಕಾದು ಕುಳಿತಿರುವ ಅವಳ ನಿರೀಕ್ಷೆ, ಆತುರ, ವಿರಹ, ದಹಿಸಿದ ಅವಳ ಹೃದಯದ ಕಾತುರತೆಗಳನ್ನು ವರ್ಣಿಸುವಾಗ ಈ ಅಷ್ಟಪದಿಯು ಅನುರಕ್ತಳಾದ ರಾಧೆಯ ಎಲ್ಲಾ ಪರಿಯ ಶೃಂಗಾರಸವ ಪರಮಾವಧಿಗೆ ನಿದರ್ಶನ---

ನಾಥಹರೇ ಜಗನ್ನಾಥಹರೇ!
ಸೀದತಿ ರಾಧಾ ವಾಸಗೃಹೇ

ಪಶ್ಯತಿ ದಿಶಿ ದಿಶಿ ರಹಸಿ ಭವಂತಂ
ತದಧರ ಮಧುರ ಮಧೂನಿ ಪಿಬಂತಂ ||೧||

(ರಾಧೆ ಕೃಷ್ಣನ ಪ್ರತೀಕ್ಷೆಯಲ್ಲಿ ಸಂಕೇತಸ್ಥಾನದಲ್ಲಿ ಏಕಾಂತದಲ್ಲಿ ದಿಕುದಿಕ್ಕುಗೆ ನೋಡುವ ದೃಶ್ಯ)

ತ್ವದಭಿಸರಣ ರಭಸೇನ ವಲಂತೀ
ಪತತಿ ಪದಾನಿ ಕಿಯಂತಿ ಚಲಂತೀ ||೨||

(ನಿನ್ನನ್ನು ಸೇರಲು ವೇಗದಿಂದ ಹೊರಟಾಗ ಶಕ್ತಿಗುಂದಿ ನೆಲಕ್ಕೆ ಬೀಳುತ್ತಾಳೆ )

ವಿಹಿತ ವಿಶದ ಕಿಸಲಯ ವಲಯಾ
ಜೀವತಿ ಪರಮಿಹ ತವ ರತಿ ಕಲಯಾ ||೩||

(ರಾಧೆ ವಿರಹ ತಾಪದ ಶಮನಕ್ಕೆ ತಾವರೆ ದಂಟು ಚಿಗುರಗಳನ್ನು ಕಂಕಣವಾಗಿ ತೊಟ್ಟು ಕಷ್ಟದಿಂದ ಜೀವಿಸಿದ್ದಾಳೆ)

ಮುಹುರವ ಲೋಕಿತ ಮಂಡನ ಲೀಲಾ
ಮಧುರಿ ಪುರಹ ಮಿತಿ ಭಾವನಶೀಲಾ ||೪||

(ಬಾರಿಬಾರಿಗೂ ತನ್ನ ಅಲಂಕಾರಗಳನ್ನು ನೋಡಿಕೊಂಡು ತಾನೇ ಕೃಷ್ಣನೆಂದು ಭಾವನಾಶೀಲಳಾಗುತ್ತಾಳೆ.)

ತ್ವರಿತ ಮುಪೈತಿ ನ ಕಥಮಭಿಸಾರಂ
ಹರಿರಿತಿ ವದತಿ ಸಖೀ ಮನುವಾರಂ ನಾಥ

(ರಾಧೆಯು ಸಖಿಯನ್ನು ಕುರಿತು ಕೃಷ್ಣನೇಕೆ ಬೇಗಬಾರನು ಎಂಬುವುದಾಗಿ ಕೇಳುತ್ತಾಳೆ.)

ಶ್ಲಿಷ್ಯತಿ ಚುಂಬತಿ ಜಲಧರ ಕಲ್ಪಂ
ಹರಿರುಪಗತ ಇತಿ ತಿಮಿರ ಮನಲ್ಪಂ ನಾಥ

(ರಾಧೆಯು ಕಪ್ಪಾದ ಕತ್ತಲೆಯನ್ನೇ ಕೃಷ್ಣನೆಂದು ಭಾವಿಸಿ ಅಪ್ಪಿಕೊಳ್ಳಲು ಮುತ್ತಿಡಲು ಮುನ್ನುಗ್ಗುವಳು.)

ಭವತಿ ವಿಲಂಬಿನಿ ವಿಗಲಿತಲಜ್ಜಾ
ವಿಲಪತಿ ರೋದಿತಿ ವಾಸಕ ಸಜ್ಜಾ || ನಾಥ ||

(ಹರಿಯೇ ನಿನ್ನ ವಿಲಂಬನದಿಂದ ಸಜ್ಜುಗೊಂಡಿರುವ ಆ ಸುಂದರಿ ಲಜ್ಜೆಬಿಟ್ಟು ವಿಲಪಿಸುತ್ತಿದ್ದಾಳೆ )

ಶ್ರೀ ಜಯದೇವ ಕವೇರಿದ ಮುದಿತಂ
ರಸಿಕಜನಂ ತನುತಾಮತಿಮುದಿತಂ

ಈ ಅಷ್ಟಪದಿ ರಸಿಕರನ್ನು ತಣಿಸಲಿ ಅಮರ ಕವಿ ಲೀಲಾಶುಕನು ತನ್ನ ಕೃಷ್ಣ ಕರ್ಣಾಮೃತದಲ್ಲಿ ರಾಧೆಯನ್ನು ಕುರಿತು "ತೇಜಸೇಽಸ್ತು ನಮೋ ಧೇನುಪಾಲಿನೇ ಲೋಕಪಾಲಿನೇ ರಾಧಾ ಪಯೋಧರೋತ್ಸಂಗ ಶಾಯಿನೇ ಶೇಷಶಾಯಿನೆ" ಎಂದು ಹೇಳುತ್ತಾ, ರಾಧೆಯ ಭಕ್ತಿಯನ್ನು ವಿವರಿಸುವಾಗ---

ರಾಧಾ ಪುನಾತು ಜಗದಚ್ಯುತದತ್ತ ಚಿತ್ತಾ
ಮಂಥಾನ ಮಾಕಲಯತೀ ದಧಿರಿಕ್ತ ಪಾತ್ರೇ
ತಸ್ಯಾ ಸ್ತನಸ್ತಬಕ ಚಂಚಲ ಲೋಲದೃಷ್ಟಿಂ
ದೇವೋಽಪಿ ದೋಹನ ಧಿಯಾ
ವೃಷಭಂ ನಿರುಂಧನ್

(ಕೃಷ್ಣನಿಗೆ ಮನಸ್ಸು ಕೊಟ್ಟವಳಾದ ರಾಧೆ ಮೊಸರಿಲ್ಲದ ಬರೀ ಪಾತ್ರೆಯಲ್ಲಿ ಅನನ್ಯ ಚಿತ್ತಳಾಗಿ ಕಡೆಗೋಲನ್ನು ಆಡಿಸಿದಳಂತೆ ಕೃಷ್ಣನಾದರೆ ಅವಳ ಎದೆಯ ಆಭೋಗವನ್ನು ಆಸಕ್ತಿಯಿಂದ ನೋಡುತ್ತ ಹಾಲು ಕರೆಯಲು ನಿತ್ತನ್ನು ಗೊತ್ತಿಗೆ ಕಟ್ಟಿದನಂತೆ.) ಅಂತಹ ರಾಧೆಯನ್ನು ಆರಾಧಿಸುವ--- ✪

[]-[]-[]-[]-[]-[]-[]-[]-[]-[]-[]-[]-[]

## ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಸಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯ್ನು ರೂಪಿಸಲಾಗಿದೆ ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ --

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ ತಿ ದೇ ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನು ಕಳುಹಿಸಬೇಕು ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ 3 ಲಕ್ಷ, ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುಲವುದು ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ, ಏಕಾಂತ ಸೇವೆಗಳು ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ, (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು ಒಂದು ಬಾರಿಗೆ 10 ಶತಾಂಶ ದಂತೆ, ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ ತಿ.ದೇ ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ ಬರೆಯಿರಿ

**ಕಾರ್ಯನಿರ್ವಹಣಾಧಿಕಾರಿ,**

ತಿ ತಿ ದೇ, ತಿರುಪತಿ




## ತಾಳ್ಳಪಾಕ ಅನ್ನಮಾಚಾರ್ಯರ 584 ನೇ ಜಯಂತಿ

ಪದಕವಿತಾಪಿತಾಮಹನಾದ ತಾಳ್ಳಪಾಕ ಅನ್ನಮಾಚಾರ್ಯರ 584 ನೇ ಜಯಂತಿ ಉತ್ಸವಗಳು 16--5--92 ರಿಂದ 12--6--92 ವರೆಗೆ ತಿರುಪತಿ, ಗುಂತಕಲ್, ಖಮ್ಮಂ, ಅಮಲಾಪುರಂ, ಖರಗ್ ಪೂರ್, ದೊಂಬಾಯಿ, ತಾಳ್ಳಪಾಕಗಳಲ್ಲಿ ಅತ್ಯಂತ ವೈಭವದಿಂದ ನಡೆದವು.

16--5--92 ರಂದು ತಿ ತಿ ದೇ ಪರಿಪಾಲನಾಭವನದಿಂದ ಶ್ರೀ ತಾಳ್ಳಪಾಕ ಅನ್ನಮಾಚಾರ್ಯರ ಶ್ರೀ ವೆಂಕಟೇಶ್ವರಸ್ವಾಮಿಯವರ ಪ್ರತಿಮೆಗಳ ಮೆರವಣಿಗೆಯಿಂದ ಈ ಉತ್ಸವಗಳು ಆರಂಭವಾದವು. ಅನಂತರ ನಡೆದ ಸಮಾರಂಭದಲ್ಲಿ ವಿಶಾಖಪಟ್ಟಂ ಪೋರ್ಟ್‌ಟ್ರಸ್ಟ್‌ನ ಅಧ್ಯಕ್ಷ ಶ್ರೀ ಪಿ ವಿ ಆರ್ ಕೆ ಪ್ರಸಾದ್ ಅವರು ಮುಖ್ಯ ಅತಿಥಿಯಾಗಿ ಆಗಮಿಸಿದ್ದರು

1992 ರ ಮೇ 21, 22 ರಂದು ಗುಂತಕಲ್‌ನಲ್ಲಿಯೂ, 24, 25 ರಂದು ಖಮ್ಮಂನಲ್ಲಿಯೂ, 30, 31 ರಂದು ಅಮಲಾಪುರದಲ್ಲಿಯೂ, ಜೂನ್ 2, 3 ರಂದು ಖರಗ್‌ಪುರದಲ್ಲಿಯೂ, 6, 7 ರಂದು ದೊಂಬಾಯಿಯಲ್ಲಿಯೂ, ಕೊನೆಯದಾಗಿ ತಾಳ್ಳಪಾಕದಲ್ಲಿಯೂ ಉಪನ್ಯಾಸಗಳು ನಡೆದವು.

ಪ್ರತಿಯೊಂದು ಕಡೆಯೂ ಪ್ರಮುಖ ವಿದ್ವಾಂಸರು ಉಪನ್ಯಾಸಗಳೆನ್ನು ನೀಡಿ ಅನ್ನಮಾಚಾರ್ಯರ ಭಕ್ತಿ ತತ್ವವನ್ನು ಸೋದಾಹರಣವಾಗಿ ವಿವರಿಸಿದರು ಸಂಗೀತ ನೃತ್ಯಕಾರ್ಯಕ್ರಮಗಳು ನಡೆದವು. ಎಲ್ಲ ಕಡೆಯಲ್ಲೂ -- ದೂರದ ಖರಗಪುರವೂ ಸೇರಿದಂತೆ -- ಜನ ಸಾವಿರ ಸಾವಿರ ಸಂಖ್ಯೆಯಲ್ಲಿ ಆಗಮಿಸಿ ಕಾರ್ಯಕ್ರಮಗಳನ್ನು ಯಶಸ್ವಿಗೊಳಿಸಿದರು

## ತಿರುಮಲೆಯಲ್ಲಿ ಮುಖ್ಯಮಂತ್ರಿ

ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್ ಜನಾರ್ದನ ರೆಡ್ಡಿ ಅವರು ಜೂನ್ 21 ರಂದು ಭಾನುವಾರ ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು ಮುಖ್ಯಮಂತ್ರಿಗಳನ್ನು ದೇವಾಲಯದ ಬಳಿ ತಿ ತಿ ದೇ ಧರ್ಮಕರ್ತರ ಮಂಡಳಿಯ ಅಧ್ಯಕ್ಷರು ಶ್ರೀ ಟಿ ಸುಬ್ಬರಾಮಿರೆಡ್ಡಿ, ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್, ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್ ಜನಾರ್ದನ ನಾಯುಡು ಮತ್ತಿತರ ಪ್ರಮುಖರು ಸ್ವಾಗತಿಸಿದರು

ದೇವಾಲಯದ ಮಹಾದ್ವಾರದ ಬಳಿ ಅವರಿಗೆ ಸಂಪ್ರದಾಯಾನುಸಾರ ಇಸ್ತಿಕಪಾಲ ಸ್ವಾಗತ ನೀಡಲಾಯಿತು ಸ್ವಾಮಿದರ್ಶನಾನಂತರ ಅವರನ್ನು ವೇದೋಕ್ತ ಆಶೀರ್ವದಿಸಲಾಯಿತು ಅಧ್ಯಕ್ಷ ಶ್ರೀ ಟಿ ಸುಬ್ಬರಾಮರೆಡ್ಡಿ ಅವರು ಮುಖ್ಯಮಂತ್ರಿಗಳಿಗೆ ಪ್ರಸಾದವನ್ನು ನೀಡಿದರು

## ಅಭಿದ್ಯೇಕ ಅಭಿಷೇಕ

ಪರಂಪರೆಯಿಂದ ಅಭಿಷೇಕಾದಿಗಳಲ್ಲಿ ಪಂಚಾಮೃತ ಸ್ನಪನ ತಿರುಮಂಜನಾದಿಗಳಲ್ಲಿ ಪ್ರಾಚೀನವಾದ ಶ್ರೀ ತಿರುಮಲೆ ಸ್ವಾಮಿಯ ಉತ್ಸವಮೂರ್ತಿಗಳು ಸಂಕೋಚಗೊಳ್ಳದಂತೆ ರಕ್ಷಿಸುವ ನಿಮಿತ್ತವಾಗಿ ಏರ್ಪಾಡು ಮಾಡಿದ ಉತ್ಸವವೇ ಅಭಿದ್ಯೇಕ ಅಭಿಷೇಕ ಪ್ರತಿ ವರ್ಷವೂ ಜ್ಯೇಷ್ಠಮಾಸದಲ್ಲಿನ ತ್ರಯೋದಶಿ, ಚತುರ್ದಶಿ, ಪೂರ್ಣಿಮೆಯ ದಿನಗಳಂದು ಮಾತ್ರವೇ ತಿರುಮಲೆಯ ಉತ್ಸವ ಮೂರ್ತಿಗಳಿಗೆ ಶಿರಸಾದಿ ಅಭಿಷೇಕ ನಡೆಯುತ್ತವೆ ಈ ಮೂರುದಿನಗಳ ಹೊರತು ಮಿಕ್ಕ ದಿನಗಳಲ್ಲಿ ಉತ್ಸವ ವಿಗ್ರಹಗಳಿಗೆ ಪಾದಾಭಿಷೇಕ ಮಾತ್ರ ನಡೆಯುತ್ತದೆ



92 ಜೂನ್ 12 ರಿಂದ 14 ವರೆಗೆ ಮೂರುದಿನಗಳ ಕಾಲ ತಿರುಮಲೆಯ ಶ್ರೀ ಮಲೆಯಪ್ಪಸ್ವಾಮಿಯವರಿಗೆ ಜ್ಯೇಷ್ಠ ಮಾಸದ ಅಭಿದ್ಯೇಕ ಅಭಿಷೇಕ ಘನವಾಗಿ ನಡೆಯಿತು

ಮೊದಲ ದಿನ 12 ನೇ ದಿನಾಂಕ ಶುಕ್ರವಾರ ಬೆಳಗ್ಗೆ ಉಭಯ ನಾಯಕಿಯರೊಡನೆ ಕೂಡಿದ ಸ್ವಾಮಿಗೆ ಪಂಚಾಮೃತ ಅಭಿಷೇಕ ನಡೆದ ನಂತರ ಸ್ವಾಮಿಗೆ ವಜ್ರಕವಚವನ್ನು ಸಮರ್ಪಿಸಿ, ಅಲಂಕಾರಗೊಳಿಸಿ ಅಂದು ಸಂಜೆ ತಿರುಮಲೆಯ ರಥಬೀದಿಗಳಲ್ಲಿ ಮೆರವಣಿಗೆ ನಡೆಸಿದರು ಎರಡನೆಯ ದಿನ ಶನಿವಾರ ಅಭಿಷೇಕಾನಂತರ ಸ್ವಾಮಿಗೆ ಮುತ್ತಿನ ಕವಚ ತೊಡಿಸಿ ಮೆರವಣಿಗೆ ಮಾಡಲಾಯಿತು



ಮೂರನೆಯ ದಿನ ಜೂನ್ 14 ರಂದು ಭಾನು ವಾರ ಸ್ವಾಮಿಗೆ ಅಭಿಷೇಕಾನಂತರ ಬಂಗಾರದ ಕವಚವನ್ನು ಅರ್ಪಿಸಲಾಯಿತು ಸರ್ವಾಲಂಕೃತ ಸ್ವಾಮಿಯನ್ನು ತಿರುಮಲೆಯ ಪುರವೀಧಿಗಳಲ್ಲಿ ಘನವಾಗಿ ಮೆರವಣಿಗೆ ಮಾಡಲಾಯಿತು ಕಡೆಯದಿನ ಸಮರ್ಪಿಸಿದ ಬಂಗಾರದ ಕವಚವನ್ನು ಮತ್ತೆ ಜ್ಯೇಷ್ಠಾಭಿಷೇಕದವರೆಗೆ ತೆಗೆಯದೆ ವರ್ಷಪೂರ್ತಿ ಹಾಗೆಯೇ ಇಡಲಾಗುವುದು

2000 ರೂಪಾಯಿಗಳ ಶುಲ್ಕ ನೀಡಿ 25 ಮಂದಿ ಗೃಹಸ್ಥರು ಈ ಅಭಿಧ್ಯೇಕ ಅಭಿಷೇಕದಲ್ಲಿ ಪಾಲುಗೊಂಡಿದ್ದರು ಅವರಿಗೆ ಸ್ವಾಮಿಪ್ರಸಾದವಾಗಿ ಲಾಡು, ವಡೆ, ವಸ್ತ್ರ ಬಹುಮಾನ ನೀಡಲಾಯಿತು

## ಅಪ್ಪಲಾಯಗುಂಟದಲ್ಲಿ ಬ್ರಹ್ಮೋತ್ಸವ

ತಿರುಪತಿಯ ಸಮೀಪದ ಅಪ್ಪಲಾಯಗುಂಟದ ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯದಲ್ಲಿ ವಾರ್ಷಿಕ ಬ್ರಹ್ಮೋತ್ಸವಗಳು 10--6--92 ರಿಂದ 19--6--92 ವರೆಗೆ ಹತ್ತು ದಿನಗಳ ಕಾಲ ಘನವಾಗಿ ನಡೆಯಿತು 10--6--92 ರಂದು ಸೇನಾಪತಿ ಉತ್ಸವವೂ, ಅಂಕುರಾರ್ಪಣೆಯೂ ನಡೆದವು. 15--6--92 ರಂದು ಗರುಡೋತ್ಸವ, 18--6--92 ರಥೋತ್ಸವವೂ 19--6--92 ರಂದು ಶುಕ್ರವಾರ ಚಕ್ರಸ್ನಾನವೂ ಯಶಸ್ವಿಯಾಗಿ ನಡೆದವು.



ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಪ್ರಾತಃಕಾಲ, ಸಂಜೆಗಳಲ್ಲಿ ಸ್ವಾಮಿಯ ವಿವಿಧ ವಾಹನಗಳ ಮೇಲೆ ಮೆರವಣಿಗೆ ನಡೆಯಿತು ಅನೇಕ ಭಕ್ತಿ, ಸಂಗೀತ, ಹರಿಕಥಾ ಕಾರ್ಯಕ್ರಮಗಳು ನಡೆದವು. ವಿಶೇಷ ಸಂಖ್ಯೆಯಲ್ಲಿ ಭಕ್ತ ಯಾತ್ರಾರ್ಥಿಗಳು ಭಾಗವಹಿಸಿದ್ದರು



## ತಿಟ್ಟೆ ಕೃಷ್ಣಯ್ಯಂಗಾರ್‌ರಿಗೆ ಕನಕ -- ಪುರಂದರ ಪ್ರಶಸ್ತಿ

ಮೈಸೂರಿನ ಸಂಗೀತ ವಿದ್ವಾಂಸ, ಗಾನವಿಶಾರದ ತಿಟ್ಟೆ ಕೃಷ್ಣಯ್ಯಂಗಾರ್ ಅವರಿಗೆ 1991 ನೇ ಸಾಲಿನ ಕನಕ -- ಪುರಂದರ ಪ್ರಶಸ್ತಿ ದೊರಕಿದೆ ಪ್ರಶಸ್ತಿ, ಒಂದು ಲಕ್ಷ ರೂಪಾಯಿಯನ್ನೊಳಗೊಂಡಿದೆ

ತೊಂಭತ್ತು ವರ್ಷ ವಯಸ್ಸಿನ ತಿಟ್ಟೆ ಕೃಷ್ಣಯ್ಯಂಗಾರ್ ಕನಕ -- ಪುರಂದರ ಪ್ರಶಸ್ತಿ ಪಡೆದ ಪ್ರಥಮರು

ಶಾಸ್ತ್ರೀಯ ಸಂಗೀತಕ್ಕೆ ಸಲ್ಲಿಸಿದ ಸೇವೆಗಾಗಿ ಪ್ರತಿವರ್ಷವೂ ಕರ್ನಾಟಕ ಹಿಂದೂಸ್ತಾನಿ ಹಿರಿಯಸಂಗೀತಗಾರರೊಬ್ಬರಿಗೆ ಶ್ರೀ ಕನಕ -- ಪುರಂದರ ಪ್ರಶಸ್ತಿಯನ್ನು ಸರ್ಕಾರ ನೀಡಲಿದೆ ವಾದ್ಯ ಕಲಾವಿದರೂ ಈ ಪ್ರಶಸ್ತಿಗೆ ಅರ್ಹರು

ಕನ್ನಡ -- ಸಂಸ್ಕೃತಿ ಸಚಿವ ಎಸ್ ರಮೇಶ್ ಈಚೆಗೆ ಪತ್ರಿಕಾಗೋಷ್ಠಿಯಲ್ಲಿ ಈ ವಿಚಾರ ತಿಳಿಸಿದರು

ಖ್ಯಾತ ಹಿಂದೂಸ್ತಾನಿ ಗಾಯಕಿ ಶ್ರೀಮತಿ ಗಂಗೂಬಾಯಿ ಹಾನಗಲ್ ಅವರು ಅಧ್ಯಕ್ಷರಾಗಿದ್ದ ಆಯ್ಕೆ ಸಮಿತಿಯು, ಸಂಗೀತ ಕ್ಷೇತ್ರದ ಸುಮಾರು 25 ಜನ ವಿಮರ್ಶಕ, ವಿದ್ವಾಂಸರ ಅಭಿಪ್ರಾಯ ಪಡೆದು ಈ ಪ್ರಶಸ್ತಿಗೆ ತಿಟ್ಟೆ ಕೃಷ್ಣಯ್ಯಂಗಾರ್ ಅವರನ್ನು ಆಯ್ಕೆ ಮಾಡಿದೆ ಡಾ ದೊರೆಸ್ವಾಮಿ ಅಯ್ಯಂಗಾರ್, ರಾಜೀವತಾರಾನಾಥ್, ಡಾ|| ರಾ ಸತ್ಯನಾರಾಯಣ, ಶೇಷಾದ್ರಿ ಗವಾಯಿ, ಕೇಂದ್ರ ಸಂಗೀತ -- ನಾಟಕ ಅಕಾಡೆಮಿ ಪ್ರತಿನಿಧಿಯಾಗಿ ಶ್ರೀಮತಿ ಮಾಯಾರಾವ್ ಮತ್ತು ರಾಜ್ಯಸರ್ಕಾರದ ಕನ್ನಡ -- ಸಂಸ್ಕೃತಿ ಇಲಾಖೆ ಮುಖ್ಯಸ್ಥರು ಆಯ್ಕೆ ಸಮಿತಿ ಸದಸ್ಯರಾಗಿದ್ದರು

ಪ್ರಶಸ್ತಿಗೆ ಪಾತ್ರರಾದ ತಿಟ್ಟೆ ಕೃಷ್ಣಯ್ಯಂಗಾರ್ ಅವರು ಗಾಯನದಲ್ಲಿ ಮಾತ್ರವಲ್ಲ, ವೀಣೆ, ಜಲತರಂಗ ನುಡಿಸುವುದರಲ್ಲೂ ಪರಿಣತರು ಕೇಂದ್ರ ಮತ್ತು ರಾಜ್ಯ ಸಂಗೀತ ನಾಟಕ ಅಕಾಡೆಮಿಗಳು ಇವರಿಗೆ ಪ್ರಶಸ್ತಿ ನೀಡಿ, ಗೌರವಿಸಿವೆ ಹಿಂದಿನ ಮೈಸೂರು ಮಹಾರಾಜರು 'ಗಾನ ವಿಶಾರದ' ಬಿರುದು ನೀಡಿ ಸನ್ಮಾನಿಸಿದ್ದರು ಸಂಗೀತ ಸಮ್ಮೇಳನಗಳ ಅಧ್ಯಕ್ಷರಾಗಿ ಗೌರವಿಸಲ್ಪಟ್ಟ ಇವರು ಸಂಗೀತದ ಬಗ್ಗೆ 2 ಗ್ರಂಥಗಳನ್ನು ಬರೆದಿದ್ದಾರೆ

ಕೃಪೆ ಕನ್ನಡಪ್ರಭ

# ಶ್ರೀ ನಮ್ಮಾಳ್ವಾರ್ ಜಯಂತಿ



ಆಳ್ವಾರ್ ದಿವ್ಯಪ್ರಬಂಧ ಪ್ರಾಜೆಕ್ಟ್ ವತಿಯಿಂದ ಹತ್ತು ದಿನಗಳ ಕಾಲ ಶ್ರೀ ನಮ್ಮಾಳ್ವಾರ್ ಜಯಂತಿ ಯನ್ನು ಆಳ್ವಾರರ ಜನನಸ್ಥಳ ಆಳ್ವಾರ್ ತಿರುನಗರಿ ಹಾಗೂ, ವಾನಮಾಮಲೈ, ಶ್ರೀರಂಗಂ, ಪಾಂಡಿಚೆರಿ, ನೆಲ್ಲೂರು, ತಿರುಪತಿಗಳಲ್ಲಿ ಜೂನ್ 3--1992 ರಿಂದ ಜೂನ್ 12--1992 ರವರೆಗೆ ನಡೆಸಲಾ ಯಿತು ಇಲ್ಲೆಲ್ಲ ತಿ ತಿ ದೇ ಪೌರಸಂಬಂಧಾಧಿ ಕಾರಿ ಡಾ|| ರಾವುಲಸೂರ್ಯನಾರಾಯಣ ಮೂರ್ತಿ ಅವರು ಉತ್ಸವಗಳನ್ನು ಉದ್ಘಾಟಿಸಿ ಪ್ರಾಜೆಕ್ಟ್‌ನ ವಿವಿಧ ಯೋಜನೆಗಳನ್ನು ಅಲ್ಲಲ್ಲಿನ ಜನತೆಗೆ ಪರಿ ಚಯ ಮಾಡಿಕೊಟ್ಟರು

ಜೂನ್ 3 ರಂದು ಆಳ್ವಾರ್ ತಿರುನಗರಿಯಲ್ಲಿ ಶ್ರೀ ಶ್ರೀ ಎಂಬೆರುಮಾನಾರ್ ಜೀಯರ್ ಸ್ವಾಮಿ ಗಳ ಅಧ್ಯಕ್ಷತೆಯಲ್ಲಿ ಬೆಂಗಳೂರಿನ ಭೂವರಾಹಾ ಚಾರ್ಯ ಸ್ವಾಮಿಗಳು ಉಪನ್ಯಾಸ ನೀಡಿದರು ಜೂನ್ 5 ರಂದು ಶ್ರೀ ಟಿ ಎ ಶಡಭಿಷೇಕ ಗೋವಿಂದ ನರಸಿಂಹಾಚಾರ್ಯರ ಅಧ್ಯಕ್ಷತೆಯಲ್ಲಿ ಶ್ರೀ ಶಡಗೋಪಾಚಾರ್ಯ, ಡಾ|| ವೈಧಾಮನಿಧಿ ಹಾಗೂ ಡಾ|| ಎಂ ವರದರಾಜನ್ ಅವರು ಉಪ ನ್ಯಾಸಗಳನ್ನು ನೀಡಿದರು ಜೂನ್ 4 ರಂದು ನಂಗು ನೇರಿಯಲ್ಲಿ ಶ್ರೀ ಶ್ರೀ ವಾನಮಾಮಲೈ ಜೀಯರ್ ಅವರ ಅಧ್ಯಕ್ಷತೆಯಲ್ಲಿ ಶ್ರೀ ಶ್ರೀರಂಗಂ ನರಸಿಂ ಹಾಚಾರ್ಯ, ಡಾ|| ಪಿ ಶೌರಿರಾಜನ್, ಡಾ|| ಆರ್ ರಂಗರಾಜನ್ ಅವರುಗಳು ಉಪನ್ಯಾಸಗ ಳನ್ನು ನೀಡಿದರು ಶ್ರೀರಂಗದಲ್ಲಿ ಜೂನ್ 7 ರಂದು ಡಾ|| ಅಪ್ಪಜೋಡು ವೆಂಕಟಸುಬ್ಬಯ್ಯ ಅವರ ಅಧ್ಯ ಕ್ಷತೆಯಲ್ಲಿ ಶ್ರೀ ಸುದರ್ಶನ ಪರಾಶರ ಭಟ್ಟರ್, ಶ್ರೀ ಟಿ ಎ ಕೆ ಶ್ರೀನಿವಾಸಾಚಾರ್ಯರು ಉಪನ್ಯಾಸಗಳನ್ನು ನೀಡಿದರು ಪಾಂಡಿಚೆರಿಯಲ್ಲಿ ಜೂನ್ 8 ರಂದು ಡಾ|| ವಿ ವರದಾಚಾರಿ ಅವರ ಅಧ್ಯಕ್ಷತೆಯಲ್ಲಿ ಶ್ರೀ ಆರ್. ಎಸ್ ಚಾರಿ, ಶ್ರೀ ಪಿ ಎಂ ಚಕ್ರವರ್ತಿಗಳು ಉಪನ್ಯಾಸಗಳನ್ನು ನೀಡಿದರು ನೆಲ್ಲೂರಿನ ಶ್ರೀರಂ ಗನಾಥ ಸ್ವಾಮಿ ದೇವಾಲಯದಲ್ಲಿ ನಡೆದ ಉತ್ಸವ ದಲ್ಲಿ ಶ್ರೀ ಕೆ ಎಸ್. ರಾಮಾನುಜಾಚಾರ್ಯ ಅವರ ಅಧ್ಯಕ್ಷತೆಯಲ್ಲಿ ಶ್ರೀ ಕೆ ಟಿ ರಾಮಾನುಜಾಚಾರ್ಯ, ಶ್ರೀ ಟಿ ಎನ್ ಸಿ ನರಸಿಂಹಾಚಾರ್ಯ ಅವರುಗಳು ಉಪನ್ಯಾಸ ನೀಡಿದರು



ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರ ದಲ್ಲಿ ಜೂನ್ 11 ಹಾಗೂ 12 ರಂದು ಉತ್ಸವ ಗಳು ನಡೆದವು. ಶ್ರೀ ಪಿ ಸುದರ್ಶನ ಭಟ್ಟಾ ಚಾರ್ಯ (ಕೋರುಕೊಂಡ) ಅವರು ಮೊದಲದಿನ ಅಧ್ಯಕ್ಷತೆ ವಹಿಸಿದ್ದರು ಶ್ರೀ ಗೋಪಾಲಾಚಾರ್ಯ, ಸಪ್ತಗಿರಿಯ ತಮಿಳು ಉಪಸಂಪಾದಕ ಶ್ರೀ ಎಸ್ ಎಸ್ ರಾಮಮೂರ್ತಿ ಅವರುಗಳು ಉಪನ್ಯಾಸ ನೀಡಿದರು ಜೂನ್ 12 ರಂದು ನಮ್ಮಾಳ್ವಾರರ ಹುಟ್ಟು ಹಬ್ಬದ ದಿನದಂದು ಡಾ|| ಪಿ. ಶೌರಿರಾ ಜನ್ ಅವರು ಅಧ್ಯಕ್ಷತೆ ವಹಿಸಿದ್ದರು ತಿರುಪತಿಯ ಡಾ|| ಪದ್ಮಜಾ ಅವರೂ ಶ್ರೀ ಆರ್ ಗೀತಾಚಾರ್ಯ ಅವರೂ ಉಪನ್ಯಾಸಗಳನ್ನು ನೀಡಿದರು

ಎಲ್ಲ ಕಡೆಗಳಲ್ಲೂ ಪ್ರಾಜೆಕ್ಟ್ ವಿಶೇಷಾಧಿಕಾರಿ ಡಾ|| ಎಂ ವರದರಾಜನ್ ಅವರು ವಂದನೆ ಸಲ್ಲಿಸಿ ದರು



# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ --- ಸೆಪ್ಟಂಬರ್ 1992

**ಗೋಕರ್ಣದ ದೇವಾಲಯಗಳು**

--ಎಂ ಆರ್ ಶಾನಭಾಗ

**ಹರಿಹರ**

--ಆರ್ ಜಿ ಶಾನಭಾಗ

**ಜಿಜ್ಞಾಸೆ**

--ಮತ್ತೀಕೆರೆ ಅನಂತು

**ಅನುಷ್ಠಾನ ವಿಧಿನಿಯಮ.**

--ಕಲ್ಯಾಣಿಮೂರ್ತಿ

**ಆನಂದ ರಾಮಾಯಣ**

--ಬ ನ ಗುಂಡೂರಾವ್

ಜೊತೆಗೇ ಮತ್ತೂ ಹಲವಾರು ಸಾಂದರ್ಭಿಕ, ಸಾಮಯಿಕ, ಆಕರ್ಷಕ, ಲೇಖನಗಳೊಡನೆ ಬಿಡುಗಡೆಯಾಗಲಿದೆ ತಮ್ಮ ಪ್ರತಿಯನ್ನು ಇಂದೇ ಕಾದಿರಿಸಿ ಬಿಡಿಪ್ರತಿಯ ಬೆಲೆ ರೂ 1/-- ಮಾತ್ರ ವಾರ್ಷಿಕ ಚಂದಾ ರೂ 1/-- ಮಾತ್ರ ವಾರ್ಷಿಕ ಚಂದಾ ಹಣವನ್ನು ಸಂಪಾದಕರು ಸಪ್ತಗಿರಿ ತಿ ತಿ ದೇ ತಿರುಪತಿ ಇವರಿಗೆ ಎಂ ಓ ಅಥವಾ ಪೋಸ್ಟಲ್ ಆರ್ಡರ್ ಮೂಲಕ ಕಳುಹಿಸಿ

# ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್‌ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸ ಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ ೯ ಗಂಟೆಯಿಂದ ಸಂಜೆ ೬ ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್‌ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏಪ್ಪಾಡು ಮಾಡಲಾಗಿದೆ ಹಾಗಾಗಿ ತಮ್ಮವಾಹನಗಳನ್ನು ದುರಸ್ತಿ ಮಾಡಿಸಿಕೊಳ್ಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು

# ತಿಂಗಳಿನ ಮುಖ್ಯದಿನಗಳು

## ಸೆಪ್ಟಂಬರ್ --- 1992

| | | |
|---|---|---|
| 1 | ಮಂಗಳವಾರ | ಋಷಿ ಪಂಚಮಿ |
| 5 | ಶನಿವಾರ | ಉಪಾಧ್ಯಾಯ ದಿನೋತ್ಸವ |
| 8 | ಮಂಗಳವಾರ | ವಾಮನ ಜಯಂತಿ |
| 10 | ಗುರುವಾರ | ಅನಂತಪದ್ಮನಾಭ ವ್ರತ |
| 11 | ಶುಕ್ರವಾರ | ಕೃಷ್ಣಾನದೀ ಪುಷ್ಕರ ಪ್ರಾರಂಭ |
| 26 | ಶನಿವಾರ | ಮಹಾಲಯ ಅಮಾವಾಸ್ಯೆ |
| 27 | ಭಾನುವಾರ | ಶರನ್ನವರಾತ್ರಿ ಆರಂಭ<br>ತಿರುಮಲೆಯಲ್ಲಿ ಬ್ರಹ್ಮೋತ್ಸವದ ಅಂಕುರಾರ್ಪಣೆ |
| 28 | ಸೋಮವಾರ | ತಿರುಮಲೆಯಲ್ಲಿ ಬ್ರಹ್ಮೋತ್ಸವದ ಧ್ವಜಾರೋಹಣ |



ತಿರುಮಲೆ -- ತಿರುಪತಿ ದೇವಸ್ಥಾನಗಳು

# ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು ವಿವಿದೆಡೆಗಳಲ್ಲಿರುವ ಈ ದೇವಾಲಯಗಳೆಂದರೆ---

1 ಶ್ರೀ ವೇದನಾರಾಯಣಸ್ವಾಮಿ ಆಲಯ

--ನಾಗುಲಾಪುರಂ

2 ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ

--ನಾರಾಯಣವನಂ

3 ಶ್ರೀ ವೇಣುಗೋಪಾಲಸ್ವಾಮಿ ಆಲಯ

--ಕಾರ್ವೇಟಿನಗರ

4 ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ

--ಅಪ್ಪಲಾಯಗುಂಟ

5 ಶ್ರೀ ವೆಂಕಟೇಶ್ವರಸ್ವಾಮಿ ಆಲಯ

--ಶ್ರೀನಿವಾಸಮಂಗಾಪುರ

6 ಆಲಯಸಮುದಾಯ --ಹೃಷೀಕೇಶ

ಭಕ್ತ ಯಾತ್ರಿಕರು ಈ ವಿಶೇಷ ಸೇವೆಯನ್ನು ದರ್ಶಿಸಬೇಕೆಂದು ವಿನಂತಿಸಲಾಗಿದೆ

**ತಿ. ತಿ. ದೇವಸ್ಥಾನಗಳು,**

ತಿರುಪತಿ



Edited and published on behalf of T T Devasthanams by K Subba Rao, M A , and Printed at T T D Press by M Vijayakumar Reddy, Manager, T T D Press, Tirupati - 517 507

